# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಅಕ್ಟೋಬರ್ ೬, ೨೦೧೬ (ಆಶ್ವಯುಜ ೧೪, ಶಕ ವರ್ಷ ೧೯೩೮)<br>Bengaluru, Thursday, October 6, 2016 (Aashwayuja 14, Shaka Varsha 1938) | ಸಂಚಿಕೆ ೪೦<br>Issue 40 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು, ಕಸಬಾ ಹೊಬಳಿ, ಮೂಡ್ಲಪಣ್ಣೆ ಗ್ರಾಮದ ಸ.ನಂ. 38ರಲ್ಲಿ 2–00 ಎಕರೆ ಗೋಮಾಳ ಜಮೀನನ್ನು ತಾಲ್ಲೂಕು ಕುರುಬರ ಸಂಘ(ರಿ), ಕೊರಟಗೆರೆ ತಾಲ್ಲೂಕು, ಇವರಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್ಎನ್‌ಡಿ/ಸಿಆರ್/6/2014–15, ದಿನಾಂಕ: 29–04–2014.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರು ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ರವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿದ್ದಾರೆ. ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು, ರವರ ವರದಿ ಪ್ರಕಾರ ಮೂಡ್ಲಪಣ್ಣೆ ಗ್ರಾಮದ ವಿವಿಧ ಸರ್ವೆ ನಂಬರುಗಳಲ್ಲಿ 167–08ಎಕರೆ ಗೋಮಾಳ ಜಮೀನಿದ್ದು, ಗ್ರಾಮದ ಜಾನುವಾರುಗಳ ಸಂಖ್ಯೆಗನುಗುಣವಾಗಿ ಸಾಕಷ್ಟು ಗೋಮಾಳ ಜಮೀನು ಲಭ್ಯವಿರುತ್ತದೆ. ಕೊರಟಗೆರೆ ಟೌನ್ 14ನೇ ವಾರ್ಡ್‌ಗೆ ಸೇರಿದ ಮೂಡ್ಲಪಣ್ಣೆ ಗ್ರಾಮದಲ್ಲಿ 154 ಜಾನುವಾರುಗಳಿದ್ದು, ನಿಯಮಾನುಸಾರ 45–00 ಎಕರೆ ಜಮೀನನ್ನು ಕಾಯ್ದಿರಿಸಬೇಕಾಗಿದ್ದು, ಉಳಿದ 122–00 ಎಕರೆ ಜಮೀನು ಲಭ್ಯವಿರುವುದಾಗಿ ಹಾಗೂ ಪ್ರಸ್ತಾವಿತ ಜಮೀನು ಬಗರ್ ಹುಕುಂ ಸಾಗುವಳಿಯಿಂದ ಮುಕ್ತವಾಗಿದ್ದು, ನಮೂನೆ 50 ಮತ್ತು ನಮೂನೆ 53ರ ಅರ್ಜಿಗಳು ಬಾಕಿ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಮುಂದುವರಿದು ಪ್ರಸ್ತಾಪಿತ ಜಮೀನಿನ ಸ್ಥಳ ತನಿಖೆ ಮಾಡಲಾಗಿದ್ದು, ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಬೆಲೆ ಬಾಳುವ ಮರಗಿಡಗಳು ಇರುವುದಿಲ್ಲವೆಂದು ಹಾಗೂ ಯಾವುದೇ ಕಟ್ಟಡಗಳು ಇರುವುದಿಲ್ಲವೆಂದು ಸದರಿ ಜಮೀನು ಕಲ್ಲುಬಂಡೆಗಳಿಂದ ಕೂಡಿದ್ದು, ವ್ಯವಸಾಯಕ್ಕೆ ಯೋಗ್ಯವಾಗಿರುವುದಿಲ್ಲವೆಂದು ಹಾಗೂ ಪ್ರಸ್ತಾಪಿತ ಜಮೀನಿಗೆ ರಸ್ತೆ ಸಂಪರ್ಕ ಇರುವುದಾಗಿ ವರದಿಮಾಡಿರುತ್ತಾರೆ. ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 97(4)ರನ್ವಯ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಸದರಿ ಜಮೀನನ್ನು ಮಂಜೂರು ಮಾಡಲು ಅನುಮತಿ ನೀಡಬೇಕಾಗುತ್ತದೆ.

ಸರ್ಕಾರದಿಂದ ಲಭ್ಯವಿರುವ ಹೈನುಗಾರಿಕೆ, ಕೋಳಿಸಾಕಾಣಿಕೆ ಹಾಗೂ ಜನಾಂಗದ ವಿದ್ಯಾರ್ಥಿಗಳಿಗೆ ಎಲ್ಲಾ ರೀತಿಯ ವಿದ್ಯಾಲಯಗಳನ್ನು ಪ್ರಾರಂಭಿಸಲು ಹಾಗೂ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿದ್ದು ಹಾಗೂ ಇತರೆ ಹಲವಾರು ಕಾರ್ಯಕ್ರಮಗಳನ್ನು ಸಂಸ್ಥೆಯು ನಿರ್ವಹಿಸಿಕೊಂಡು ಬರುತ್ತಿರುವುದಾಗಿ ತಹಶೀಲ್ದಾರ್ ರವರು ವರದಿಯಲ್ಲಿ ತಿಳಿಸಿದ್ದು ಅಧ್ಯಕ್ಷರು, ತಾಲ್ಲೂಕು ಕುರುಬರ ಸಂಘ (ರಿ), ಕೊರಟಗೆರೆ ಇವರು ಸಹ ಸಂಸ್ಥೆಯ ಧ್ಯೇಯೋದ್ದೇಶಗಳನ್ನು ವಿವರಿಸಿದ್ದು, ಬಡ ಶಾಲಾ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಶಾಲೆ ತೆರೆಯುವುದು, ಸ್ವಯಂ ಉದ್ಯೋಗ ಕಲ್ಪಿಸಲು ಅರ್ಹ ಅಭ್ಯರ್ಥಿಗಳಿಗೆ ವಿವಿಧ ಕೌಶಲ್ಯ ತರಬೇತಿ ನೀಡುವುದು, ಸಾಮೂಹಿಕ ವಿವಾಹಗಳನ್ನು ಪ್ರೋತ್ಸಾಹಿಸುವುದು ಹಾಗೂ ವಿವಿಧ ಸಭೆ ಸಮಾರಂಭಗಳನ್ನು ಉಚಿತ ಆರೋಗ್ಯ ತಪಾಸಣಾ ಶಿಬಿರಗಳನ್ನು ಏರ್ಪಡಿಸಲು ಒಂದು ಸುಸಜ್ಜಿತ ಕನಕಭವನ ನಿರ್ಮಾಣ ಮಾಡಲು ಉದ್ದೇಶಿಸಲಾಗಿದೆ ಎಂದು ತಿಳಿಸಿರುತ್ತಾರೆ. ಮುಂದುವರೆದು, ಅನಾಥಾಶ್ರಮ, ವೃದ್ಧಾಶ್ರಮ ಹಾಗೂ ಗ್ರಂಥಾಲಯ, ವಾಚನಾಲಯ ಮುಂತಾದ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು ಸಂಘದ ಮುಖ್ಯ ಉದ್ದೇಶವಾಗಿದೆ ಎಂದು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿ ಭೂ ಮಂಜೂರಾತಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 43 ಎಲ್‌ಜಿಟಿ 2014, ಬೆಂಗಳೂರು, ದಿನಾಂಕ: 18–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು, ಕಸಬಾ ಹೋಬಳಿ, ಮೂಡ್ಲಪಣ್ಣೆ ಗ್ರಾಮದ ಸ.ನಂ. 38ರಲ್ಲಿ 2–00 ಎಕರೆ ಗೋಮಾಳ ಜಮೀನನ್ನು ತಾಲ್ಲೂಕು ಕುರುಬರ ಸಂಘ (ರಿ), ಕೊರಟಗೆರೆ ತಾಲ್ಲೂಕು, ಕೊರಟಗೆರೆ ಇವರಿಗೆ ವಿವಿಧ

ಉದ್ದೇಶಗಳಿಗಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 22-ಎ ರನ್ವಯ ಪ್ರಚಲಿತ ಮಾರುಕಟ್ಟೆ ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಹಾಗೂ ನಗರ/ಮುನಿಸಿಪಲ್ ವ್ಯಾಪ್ತಿಯೊಳಗೆ ಬರುವ ಸರ್ಕಾರಿ ಜಮೀನನ್ನು ಯಾವುದೇ ಖಾಸಗಿ ಸಂಸ್ಥೆ ಅಥವಾ ವ್ಯಕ್ತಿಗಳಿಗೆ ಮಂಜೂರು ಮಾಡಬಾರದೆಂದು ನಿಯಮಗಳಲ್ಲಿ ಇರುವ ಅವಕಾಶವನ್ನು ಸಡಿಲಿಸಿ ಮಂಜೂರು ಮಾಡಿ ಆದೇಶಿಸಿದೆ.

1. ಜಮೀನು ಹಸ್ತಾಂತರ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರು ನಿಯಮಾನುಸಾರ ನಿರ್ವಹಿಸಲು ನಿರ್ದೇಶನ ನೀಡಿದೆ.
2. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
3. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ ಈ ಮಂಜೂರಾತಿಯ ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
4. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲಿ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲಿ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು ಹಾಗೂ ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
5. ಮಂಜೂರಾದ ಜಮೀನಿನಲ್ಲಿ, ಅಭಿವೃದ್ಧಿ ಕಾರ್ಯಗಳನ್ನು ಆರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರಾವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
6. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ, ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೆ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

**P.R.530**
**SC. 50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರೇವಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಭೂ ಮಂಜೂರಾತಿ-3)

## ಕಂದಾಯ ಸಚಿವಾಲಯ

**ವಿಷಯ :** ಸೇನಾ, ವಾಯು ಹಾಗೂ ನೌಕಾದಳದ ಅಧಿಕಾರಿ ಸಿಬ್ಬಂದಿಗಳಿಗೆ ವಸತಿ (Domicile) ದೃಢೀಕರಣ ಪತ್ರ ವಿತರಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಅಟಲ್‌ಜೀ ಜನಸ್ನೇಹಿ ನಿರ್ದೇಶನಾಲಯರವರ ಪತ್ರ ಸಂಖ್ಯೆ: ಕಂಇ/ಎಜೆಎಸ್ಕೆ/ಆಡಳಿತ-59/13-14, ದಿನಾಂಕ: 01.03.2016.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಅಟಲ್ ಜೀ ಜನಸ್ನೇಹಿ ನಿರ್ದೇಶಕರವರು ಭಾರತೀಯ ಸೇನೆ, ವಾಯುಪಡೆ ಹಾಗೂ ನೌಕದಳದಲ್ಲಿ ಸೇವೆ ಸಲ್ಲಿಸುತ್ತಿರುವ ಅಧಿಕಾರಿ/ಸಿಬ್ಬಂದಿಗಳು ವಸತಿ (Domicile) ದೃಢೀಕರಣ ಪತ್ರವನ್ನು ನೀಡುವಂತೆ ಅರ್ಜಿಯನ್ನು ಸಲ್ಲಿಸುತ್ತಿದ್ದು, ಆದರೆ ಅರ್ಜಿದಾರರುಗಳು ಸಂಬಂಧಿಸಿದ ವಿಳಾಸದಲ್ಲಿ ವಾಸವಿಲ್ಲದ ಕಾರಣ ಅರ್ಜಿಯನ್ನು ತಿರಸ್ಕರಿಸಲಾಗುತ್ತದೆ. ಆದುದರಿಂದ ಸದರಿ ಅಧಿಕಾರಿ/ಸಿಬ್ಬಂದಿಗಳು ಸಂಬಂಧಿಸಿದ ವಿಳಾಸದಲ್ಲಿ ವಾಸವಿಲ್ಲವೆಂಬ ಕಾರಣದಿಂದ ಅವರುಗಳಿಗೆ ವಸತಿ (Domicile) ದೃಢೀಕರಣ ಪತ್ರವನ್ನು ನೀಡಲು ನಿರಾಕರಿಸುವುದು ಸರಿಯಾದ ಕ್ರಮವಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಜನಿಸಿ ವಿದ್ಯಾಭ್ಯಾಸ ಮಾಡಿ ರಕ್ಷಣಾ ಕಾರ್ಯದ ಸಂಬಂಧ ಹೊರರಾಜ್ಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿಗಳಿಗೆ ವಸತಿ (Domicile) ದೃಢೀಕರಣ ಪತ್ರ ನೀಡಲು ಈ ಕೆಳಕಂಡ ಅರ್ಹತಾ ಅಂಶಗಳನ್ನು ಆಧಾರವನ್ನಾಗಿಟ್ಟುಕೊಳ್ಳಬಹುದಾಗಿದೆ ಎಂದು ಅಭಿಪ್ರಾಯಪಟ್ಟಿರುತ್ತಾರೆ.

1. ಕರ್ನಾಟಕದಲ್ಲಿ ಜನಿಸಿದವರು.
2. ಅವರು ಮತ್ತು ಅವರ ತಂದೆ ಅಥವಾ ತಾಯಿ ಸುಮಾರು ಹತ್ತು ವರ್ಷ ಕರ್ನಾಟಕದಲ್ಲಿ ವಾಸವಾಗಿರುವುದು ಹಾಗೂ ಈ ಸಂಬಂಧ ಮತದಾರರ ಗುರುತಿನ ಚೀಟಿ/ಪಡಿತರ ಚೀಟಿಗಳನ್ನು ಹೊಂದಿರುವುದು.
3. ಹತ್ತನೇ ತರಗತಿಯವರೆಗೆ ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗ ಮಾಡಿರುವವರು.

ಮುಂದುವರೆದು ಈ ಮೇಲಿನ ಅರ್ಹತಾ ಅಂಶಗಳನ್ನು ಪರಿಶೀಲಿಸಿ, ಸೂಕ್ತ ದಾಖಲಾತಿಗಳನ್ನು ಸಲ್ಲಿಸುವ ಸೇನಾ, ವಾಯು ಹಾಗೂ ನೌಕದಳದಲ್ಲಿ ಹೊರ ರಾಜ್ಯಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಧಿಕಾರಿ/ಸಿಬ್ಬಂದಿಗಳಿಗೆ ವಸತಿ (Domicile) ದೃಢೀಕರಣ ಪತ್ರಗಳನ್ನು ನೀಡುವ ಸಂಬಂಧ ಸೂಕ್ತ ಆದೇಶ ಹೊರಡಿಸುವಂತೆ ಕೋರಿದ್ದಾರೆ.

**ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.**

**ಸರ್ಕಾರದ ಆದೇಶ ಸಂಖ್ಯೆ: ಕಂಇ 75 ಎಜೆಎಸ್ 2015, ಬೆಂಗಳೂರು ದಿನಾಂಕ: 28.06.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳಂತೆ ಭಾರತೀಯ ಸೇನಾ, ವಾಯುಪಡೆ ಹಾಗೂ ನೌಕದಳದಲ್ಲಿ ಸೇವೆ ಸಲ್ಲಿಸುತ್ತಿರುವ ಅಧಿಕಾರಿ/ಸಿಬ್ಬಂದಿಗಳು ಸಂಬಂಧಿಸಿದ ವಿಳಾಸದಲ್ಲಿ ವಾಸವಿಲ್ಲದೆ ಹೊರರಾಜ್ಯಗಳಲ್ಲಿ ಸೇವೆ ಸಲ್ಲಿಸುತ್ತಿರುವವರುಗಳಿಗೆ ಈ ಕೆಳಕಂಡ ಅರ್ಹತಾ ಅಂಶಗಳನ್ನು ಆಧಾರವಾಗಿಟ್ಟುಕೊಂಡು ವಸತಿ (Domicile) ದೃಢೀಕರಣ ಪತ್ರವನ್ನು ನೀಡಲು ಆದೇಶಿಸಲಾಗಿದೆ.

1. ಕರ್ನಾಟಕದಲ್ಲಿ ಜನಿಸಿದವರು.

2. ಅವರು ಮತ್ತು ಅವರ ತಂದೆ ಅಥವಾ ತಾಯಿ ಸುಮಾರು ಹತ್ತು ವರ್ಷ ಕರ್ನಾಟಕದಲ್ಲಿ ವಾಸವಾಗಿರುವುದು ಹಾಗೂ ಈ ಸಂಬಂಧ ಮತದಾರರ ಗುರುತಿನ ಚೀಟಿ/ಪಡಿತರ ಚೀಟಿಗಳನ್ನು ಹೊಂದಿರುವುದು.
3. ಹತ್ತನೆ ತರಗತಿಯವರೆಗೆ ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗ ಮಾಡಿರುವವರು.

**P.R 531**
**SC. 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಪುಟ್ಟನಂಜಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಭೂಮಾಪನ)

## ಒಳಾಡಳಿತ ಸಚಿವಾಲಯ

**ವಿಷಯ :** ರಾಜ್ಯ ಪೊಲೀಸ್ ಸಿಬ್ಬಂದಿಯವರಿಗೆ ಆರೋಗ್ಯ ಭಾಗ್ಯ ಯೋಜನೆಯಡಿ ಪೊಲೀಸ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್‌ಗೆ ಮರುಪಾವತಿ ಜಾರಿ ವಿಧಾನ ಬದಲಾವಣೆ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ ಒಇ 04 ಪೊಸಿಇ 2002, ದಿನಾಂಕ : 01–04–2002.
2) ಪತ್ರ ಸಂಖ್ಯೆ : ಎಬಿವೈ/263/2014–15, ದಿನಾಂಕ : 08–06–2015 ಮತ್ತು ದಿನಾಂಕ : 21–08–2015, ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು.
3) ಸರ್ಕಾರದ ಆದೇಶ ಸಂಖ್ಯೆ : ಒಇ 188 ಪೊಸಿಇ 2015, ದಿನಾಂಕ : 22–01–2016.
4) ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಎಫ್‌ಆರ್ & ಬಿ.ಸಿ.ಸಿ.) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 164 ಆನಿ 2016, ದಿನಾಂಕ : 14–07–2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಆದೇಶದಲ್ಲಿ ರಾಜ್ಯ ಪೊಲೀಸ್ ಸಿಬ್ಬಂದಿ ಮತ್ತು ಅಧಿಕಾರಿಗಳಿಗೆ ಉತ್ತಮ ವೈದ್ಯಕೀಯ ಸೇವೆಗಳು ಸಕಾಲದಲ್ಲಿ ಮತ್ತು ಯೋಗ್ಯ ದರದಲ್ಲಿ ದೊರೆಯುವಂತೆ ಮಾಡುವುದನ್ನು ಸರ್ಕಾರವು ಮನಗೊಂಡು ಒಂದು ವಿಶೇಷ ಯೋಜನೆಯನ್ನು ರೂಪಿಸಲು ಟ್ರಸ್ಟನ್ನು ಸ್ಥಾಪಿಸಿ, ಸರ್ಕಾರದ ಮಂಜೂರಾತಿಯನ್ನು ಕಾಯ್ದಿರಿಸಿ, ಮತ್ತು ಯೋಜನೆಯ ಪೂರ್ಣ ವಿವರಗಳನ್ನು ಅಂತಿಮಗೊಳಿಸುವುದನ್ನು ಕಾಯ್ದಿರಿಸಿ, ರಾಜ್ಯ ಪೊಲೀಸ್ ಸಿಬ್ಬಂದಿ ಮತ್ತು ಅಧಿಕಾರಿಗಳ ಅನುಕೂಲಕ್ಕಾಗಿ ಆರೋಗ್ಯ ಭಾಗ್ಯ ಯೋಜನೆಯನ್ನು ಜಾರಿಗೊಳಿಸಲು ಸರ್ಕಾರದ ತಾತ್ವಿಕ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಆರೋಗ್ಯ ಭಾಗ್ಯ ಯೋಜನೆಯಡಿಯಲ್ಲಿ ಚಿಕಿತ್ಸೆ ಪಡೆಯುವ ರಾಜ್ಯ ಪೊಲೀಸ್ ಸಿಬ್ಬಂದಿ/ಅಧಿಕಾರಿ ಹಾಗೂ ಅವರ ಅವಲಂಬಿತ ಕುಟುಂಬ ಸದಸ್ಯರ ಚಿಕಿತ್ಸಾ ವೆಚ್ಚವನ್ನು ಕರ್ನಾಟಕ ಸರ್ಕಾರ (ವೈದ್ಯಕೀಯ ಹಾಜರಾತಿ) ನಿಯಮ 1963ರ ಪ್ರಕಾರ ಮರು ಪಾವತಿಸಿಕೊಳ್ಳುವ ಕರ್ನಾಟಕ ಪೊಲೀಸ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್ ಹೆಸರಿಗೆ ಖಜಾನೆಯಿಂದ ಚೆಕ್ ನೀಡುವಲ್ಲಿ ಸಮಸ್ಯೆ ಉಂಟಾಗುತ್ತಿದ್ದು ಅದಕ್ಕೆ ಶಾಶ್ವತ ಪರಿಹಾರವನ್ನು ನೀಡುವಂತೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಆರೋಗ್ಯ ಭಾಗ್ಯ ಯೋಜನೆಯಡಿಯಲ್ಲಿ ಚಿಕಿತ್ಸೆ ಪಡೆಯುವ ರಾಜ್ಯ ಪೊಲೀಸ್ ಸಿಬ್ಬಂದಿ/ಅಧಿಕಾರಿ ಹಾಗೂ ಅವಲಂಬಿತ ಕುಟುಂಬ ಸದಸ್ಯರ ಚಿಕಿತ್ಸಾ ವೆಚ್ಚವನ್ನು ಕರ್ನಾಟಕ ಸರ್ಕಾರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ಪ್ರಕಾರ ಮರುಪಾವತಿಸಿಕೊಳ್ಳುವಾಗ ಕರ್ನಾಟಕ ಪೊಲೀಸ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್ ಹೆಸರಿಗೆ ಜುಲೈ 2016ರ ಅಂತ್ಯದ ವರೆಗೂ ಖಜಾನೆಯಿಂದ ಚೆಕ್ ನೀಡಲು ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಪೊಲೀಸ್ ಇಲಾಖೆಯ ಸಿಬ್ಬಂದಿಯವರಿಗೆ ಆರೋಗ್ಯ ಭಾಗ್ಯ ಯೋಜನೆಗೆ ಸಂಬಂಧಿಸಿದಂತೆ ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ ಕಾರ್ಯದರ್ಶಿ (ಆ ಮತ್ತು ಸಂ) ಆರ್ಥಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ : 07–06–2016 ರಂದು ನಡೆದ ಸಭಾ ನಡವಳಿಯ ಪ್ರತಿಯನ್ನು ಕಳುಹಿಸಿ ಸದರಿ ಸಭೆಯಲ್ಲಿ ತೀರ್ಮಾನಿಸಿದಂತೆ ಆರೋಗ್ಯ ಭಾಗ್ಯ ಯೋಜನೆ ಅನುಷ್ಠಾನಗೊಳಿಸುವ ಬಗ್ಗೆ ಸೂಕ್ತ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

**ಆರೋಗ್ಯ ಭಾಗ್ಯ ಯೋಜನೆ :**

**1. ಯೋಜನೆ ವಿವರ**

- ಆರೋಗ್ಯ ಭಾಗ್ಯ ಯೋಜನೆಯನ್ನು ಮಹಾ ನಿರ್ದೇಶಕರು ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಇವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಪೊಲೀಸ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್ ನಿರ್ವಹಿಸಿಕೊಂಡು ಬರಲಾಗುತ್ತಿದೆ.
- ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ ನಿಯಮ 1963 ರಡಿಯಲ್ಲಿ ಸರ್ಕಾರದಿಂದ ಮಾನ್ಯತೆ ಪಡೆದ ಆಸ್ಪತ್ರೆಗಳನ್ನು ಮಾತ್ರ ಈ ಯೋಜನೆಯಡಿ ಗುರುತಿಸಲಾಗಿದ್ದು, ಸರ್ಕಾರದ ಆದೇಸ ಸಂಖ್ಯೆ : ಸಿಆಸುಇ 2 ಎಸ್‌ಎಂಆರ್ 2008, ದಿನಾಂಕ : 24–10–2009 ರಂತೆ ಸಿಜಿಹೆಚ್‌ಎಸ್ ದರಗಳನ್ನು ಅನುಸರಿಸಿ ವೈದ್ಯಕೀಯ ವೆಚ್ಚ ಮರುಪಾವತಿ ಮಾಡಲಾಗುತ್ತಿದೆ.
- ಈ ಯೋಜನೆಯ ಬಾಬ್ತು ದಿನಾಂಕ : 01–04–2012 ರಿಂದ ಜಾರಿಗೆ ಬರುವಂತೆ ವಂತಿಗೆ ಮೊತ್ತವನ್ನು ಪತ್ರಾಂಕಿತ ಅಧಿಕಾರಿಗಳಿಗೆ ₹. 50 ರಿಂದ ₹. 110/– ಕ್ಕೆ ಮತ್ತು ಅಪತ್ರಾಂಕಿತ ಅಧಿಕಾರಿಗಳಿಗೆ ₹. 40/– ರಿಂದ ₹. 100/– ಹೆಚ್ಚಿಸಲಾಗಿದೆ.
- ಈ ಯೋಜನೆಯಡಿ ಒಳರೋಗಿ ಚಿಕಿತ್ಸಾ ಸೌಲಭ್ಯವನ್ನು ಮಾತ್ರ ಪಡೆಯಲು ಅವಕಾಶವಿದೆ. ಹೊರರೋಗಿ ಮತ್ತು ಕೆಲವು ಇತರೇ ಚಿಕಿತ್ಸೆಯನ್ನು ಈ ಯೋಜನೆಯಡಿ ಪಡೆಯಲು ಸಾಧ್ಯವಿರುವುದಿಲ್ಲ.

2. **ಆರೋಗ್ಯ ಭಾಗ್ಯ ಯೋಜನೆಯಡಿ ಪರಿಗಣಿಸಲಾದ ಖಾಯಿಲೆಗಳು :**

- ಹೃದಯಕ್ಕೆ ಸಂಬಂಧಿಸಿದ ಖಾಯಿಲೆ (ವೈದ್ಯಕೀಯ ಚಿಕಿತ್ಸೆ ಅಥವಾ ಶಸ್ತ್ರ ಚಿಕಿತ್ಸೆ ಅಗತ್ಯವಿರುವುದು)
- ಮೂತ್ರಪಿಂಡ ತೊಂದರೆಗಳು
- ಎಲ್ಲಾ ರೀತಿಯ ಕ್ಯಾನ್ಸರ್
- ತುರ್ತು ಚಿಕಿತ್ಸೆ ಅಗತ್ಯವಿರುವ ಎಲ್ಲಾ ಖಾಯಿಲೆಗಳು
- ಐ.ಸಿ.ಯು ಆರೈಕೆ ಬೇಕಾದ ಎಲ್ಲಾ ಖಾಯಿಲೆಗಳು
- ಎಲ್ಲಾ ಗಂಭೀರ ಮತ್ತು ಮಾರಣಾಂತಿಕ ಖಾಯಿಲೆಗಳು
- ಹೆರಿಗೆ (ಸಾಮಾನ್ಯ ಮತ್ತು ಸಿಜೇರಿಯನ್)
- ಒಳರೋಗಿಯಾಗಿ ದಾಖಲಾಗಬೇಕಾದ ಕಣ್ಣಿನ ಎಲ್ಲಾ ಖಾಯಿಲೆಗಳು
- ಆಸ್ಪತ್ರೆಯಲ್ಲಿ ಚಿಕಿತ್ಸೆ ಅಗತ್ಯವಿರುವ ಅಘಾತಗಳಿಂದ ಎಲ್ಲಾ ಸಮಸ್ಯೆಗಳು

3. **ಆರೋಗ್ಯ ಭಾಗ್ಯ ಯೋಜನೆಯಡಿ ಪರಿಗಣಿಸಲಾದ ಖಾಯಿಲೆಗಳು**

- ಹೊರರೋಗಿ ಚಿಕಿತ್ಸೆ
- ಸೌಂದರ್ಯವರ್ಧಕ ಚಿಕಿತ್ಸೆ
- ಆತ್ಮಹತ್ಯೆ ಪ್ರಯತ್ನ
- ಸ್ವ-ಇಚ್ಛಾ ಗರ್ಭಪಾತ
- ಕುಟುಂಬ ಯೋಜನೆ ಮತ್ತು ಲ್ಯಾಪ್ರೋಸ್ಕೋಪಿಕ್ ಸ್ಟರಿಲೈಜೇಷನ್
- ಸಾಮಾನ್ಯ ದಂತ ಚಿಕಿತ್ಸೆ

4. **ಯೋಜನೆಯಡಿ ಚಿಕಿತ್ಸೆ ನಂತರ ವೈದ್ಯಕೀಯ ಬಿಲ್ಲುಗಳನ್ನು ಪಾವತಿಸಲಾಗುತ್ತಿರುವ ಪ್ರಸ್ತುತ ವಿಧಾನ :**

- ಚಿಕಿತ್ಸೆ ಅಗತ್ಯವಿರುವ ವ್ಯಕ್ತಿ ಘಟಕಾಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಪಡೆದು ಮಾನ್ಯತೆ ಪಡೆದ ಆಸ್ಪತ್ರೆಗಳಲ್ಲಿ ಒಳರೋಗಿ ಚಿಕಿತ್ಸೆ ಪಡೆಯುವುದು. ತುರ್ತು ಸಮಯದಲ್ಲಿ ಇಲಾಖಾ ಗುರುತಿನ ಪತ್ರ ತೋರಿಸಿ ಆಸ್ಪತ್ರೆಗೆ ದಾಖಲಾಗಬಹುದಾಗಿದೆ.
- ಚಿಕಿತ್ಸೆಯ ನಂತರ ಆಸ್ಪತ್ರೆಯಿಂದ ವೈದ್ಯಕೀಯ ಬಿಲ್ಲುಗಳನ್ನು ಕರ್ನಾಟಕ ಪೊಲೀಸ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್‌ಗೆ ಕಳುಹಿಸಲಾಗುವುದು.
- ಆರೋಗ್ಯ ಭಾಗ್ಯ ಯೋಜನೆಯಡಿ ಟ್ರಸ್ಟ್ ಬಿಲ್ಲುಗಳ ಪರಿಶೀಲನೆಗಾಗಿ ಹೊರಗುತ್ತಿಗೆ ನೀಡಲಾಗಿರುವ ಸಂಸ್ಥೆ ಸಿಜಿಹೆಚ್‌ಎಸ್ ದರದ ಪ್ರಕಾರ ಬಿಲ್ಲುಗಳ ಪರಿಶೀಲನೆ ಮಾಡಿ ಅರ್ಹತಾ ಮೊತ್ತ ಮಂಜೂರಾತಿಗಾಗಿ ಟ್ರಸ್ಟ್ ಕಾರ್ಯದರ್ಶಿಯವರಿಗೆ ವರದಿ ನೀಡುತ್ತದೆ.
- ಅರ್ಹತಾ ಮೊತ್ತಕ್ಕೆ ಮಂಜೂರಾತಿ ನೀಡಿ, ಸಂಬಂಧಪಟ್ಟ ಆಸ್ಪತ್ರೆಗಳಿಗೆ ನೇರ ಪಾವತಿಯನ್ನು ಇಸಿಎಸ್ ಮೂಲಕ ಬ್ಯಾಂಕ್‌ಗೆ ಕಳುಹಿಸಿ ಕೊಡಲಾಗುತ್ತದೆ.
- ನಂತರ ಬಿಲ್ಲುಗಳನ್ನು ಸಂಬಂಧಪಟ್ಟ ಘಟಕಾಧಿಕಾರಿಗಳಿಗೆ ಕಳುಹಿಸಲಾಗುತ್ತದೆ. ಘಟಕಾಧಿಕಾರಿಗಳು ಶಿಫಾರಸ್ಸು ಮಾಡಿದ ಮೊತ್ತಕ್ಕೆ ಮಂಜೂರಾತಿ ಆದೇಶವನ್ನು ಹೊರಡಿಸಿ ಖಜಾನೆಗೆ ಬಿಲ್ಲುಗಳನ್ನು ಸಲ್ಲಿಸಿ ಮರುಪಾವತಿ ಮೊತ್ತಕ್ಕೆ ಚೆಕ್ಕನ್ನು ಟ್ರಸ್ಟ್ ಹೆಸರಿನಲ್ಲಿ ಪಡೆದು ಕಳುಹಿಸುವುದು.

5. **ಯೋಜನೆಯಡಿ ಭರಿಸಲಾದ ಇತರ ವೆಚ್ಚಗಳು :**

- ಕನ್ಸ್ಯೂಮೆಬಲ್ ಮತ್ತು ನಾನ್-ಮೆಡಿಕಲ್ ವಸ್ತುಗಳ ಮೊತ್ತ ಮರುಪಾವತಿ ಆಗುವುದಿಲ್ಲವಾದ್ದರಿಂದ ಇದನ್ನು ಈ ಯೋಜನೆ ಅಡಿ ಪಾವತಿಸಲಾಗುವುದಿಲ್ಲ. ಇದನ್ನು ಫಲಾನುಭವಿ ಪಾವತಿಸಬೇಕು.
- ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 25 ಎಸ್‌ಎಂಆರ್ 2012, ದಿನಾಂಕ : 03-07-2014ರಲ್ಲಿ ನಿಗದಿಪಡಿಸಿದ ವಾರ್ಡ್‌ಗಿಂತ ಮೇಲಿನ ಹಂತದ ವಾರ್ಡ್ ಪಡೆದಲ್ಲಿ ವಾರ್ಡ್ ಮತ್ತು ತನ್ಮೂಲಕ ಪ್ಯಾಕೇಜ್ ದರದಲ್ಲಾಗುವ ವ್ಯತ್ಯಾಸವನ್ನು ಫಲಾನುಭವಿ ಪಾವತಿಸಬೇಕು.
- ಸಿಜಿಹೆಚ್‌ಎಸ್ ನಲ್ಲಿ ನಿಗದಿಯಾದ ದರಕ್ಕಿಂತ ಪ್ಯಾಕೇಜ್ ದರ/ಸಾಧನ ಸಾಮಾಗ್ರಿಗಳ ದರ ಹೆಚ್ಚಾಗಿದ್ದಲ್ಲಿ ನೋಡಲ್ ಏಜೆನ್ಸಿಯ ಅಭಿಪ್ರಾಯ ಪಡೆದು ವ್ಯತ್ಯಾಸ ಮೊತ್ತದಲ್ಲಿ ಅರ್ಧದಷ್ಟು ಟ್ರಸ್ಟ್ ವತಿಯಿಂದ ನೀಡಲಾಗುತ್ತದೆ.
- ಸಿಜಿಹೆಚ್‌ಎಸ್ ದರದಲ್ಲಿ ಶಸ್ತ್ರ ಚಿಕಿತ್ಸೆಗೆ ಪ್ಯಾಕೇಜ್ ದರ ನಿಗದಿಯಾಗಿರದಿದ್ದಲ್ಲಿ ನೋಡಲ್ ಏಜೆನ್ಸಿಯವರ ಅಭಿಪ್ರಾಯ ಪಡೆದು ಅರ್ಧದಷ್ಟು ಮೊತ್ತವನ್ನು ಟ್ರಸ್ಟ್ ವತಿಯಿಂದ ನೀಡಲಾಗುತ್ತದೆ.
- ಸಿಜಿಹೆಚ್‌ಎಸ್ ನಲ್ಲಿ ದರ ನಿಗದಿಯಾಗದ ಸಾಮಗ್ರಿ ಪರಿಕರಗಳನ್ನು ಆಸ್ಪತ್ರೆಯವರು ಹೊರಗಿನಿಂದ ಖರೀದಿಸಿದ್ದಲ್ಲಿ ಅದರ ದರವನ್ನು ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 2 ಎಸ್‌ಎಂಆರ್ 2008, ದಿನಾಂಕ : 24-10-2009ರಲ್ಲಿ ಅವಕಾಶದ ಮೇರೆಗೆ ಇನ್‌ವಾಯ್ಸ್ ಒದಗಿಸುವ ಷರತ್ತಿನ ಮೇಲೆ ಮರುಪಾವತಿಸಲಾಗುತ್ತದೆ.

ಯಾವುದೇ ಸಂದರ್ಭದಲ್ಲಿ ಅಧಿಕಾರಿ/ನೌಕರನು ಆರೋಗ್ಯ ಭಾಗ್ಯ ಯೋಜನೆಯಡಿ ಮರುಪಾವತಿ ಪಡೆಯಲು ಇಚ್ಛಿಸದಿದ್ದಲ್ಲಿ ಅಂತಹ ನೌಕರನು ಇತರ ಇಲಾಖೆಯ ನೌಕರರಂತೆ ತಮ್ಮ ನಿಯಂತ್ರಣಾಧಿಕಾರಿಗೆ ಮೂಲ ಬಿಲ್ಲುಗಳನ್ನು ಸಲ್ಲಿಸಿ ವೈದ್ಯಕೀಯ ಹಾಜರಾತಿ ನಿಯಮಗಳನ್ವಯ ಮರುಪಾವತಿ ಪಡೆಯಲು ಅರ್ಹರಾಗಿರುತ್ತಾರೆ.

ಸಿಬ್ಬಂದಿ ಆಡಳಿತ ಸುಧಾರಣೆ ಇಲಾಖೆಯು ಜಾರಿಗೆ ತಂದಿರುವ 'ಜ್ಯೋತಿ ಸಂಜೀವಿನಿ' ಯೋಜನೆಯ ಅನುಷ್ಠಾನಕ್ಕಾಗಿ ಪ್ರತ್ಯೇಕ ಟ್ರಸ್ಟನ್ನು ಸ್ಥಾಪಿಸಿದ್ದು, ಸರ್ಕಾರದಿಂದ ಈ ಟ್ರಸ್ಟಿಗೆ ತ್ರೈಮಾಸಿಕ ಹಣ ಬಿಡುಗಡೆ ಮಾಡಲಾಗುತ್ತಿದೆ ಹಾಗೂ ಈ ಯೋಜನೆಯಡಿ ಚಿಕಿತ್ಸೆ ನೀಡಿದ ಆಸ್ಪತ್ರೆಗಳಿಗೆ ಮೊತ್ತವನ್ನು ಟ್ರಸ್ಟ್ ವತಿಯಿಂದ ನೇರವಾಗಿ ಪಾವತಿಸಲಾಗುತ್ತಿದೆ. ಇದೇ ಕ್ರಮವನ್ನು ಆರೋಗ್ಯ ಭಾಗ್ಯ ಯೋಜನೆಗೂ ಅನುಸರಿಸಬಹುದಾಗಿದೆ. ಆದರೆ ಜ್ಯೋತಿ ಸಂಜೀವಿನಿ ಯೋಜನೆಯಡಿ ಬರುವ 6 ಮಾರಣಾಂತಿಕ ಖಾಯಿಲೆಗಳಿಗೆ ಪ್ಯಾಕೇಜ್ ದರ ನಿಗದಿಪಡಿಸಿದ್ದು, ಆರೋಗ್ಯ ಭಾಗ್ಯ ಯೋಜನೆಯಡಿ ವೈದ್ಯಕೀಯ ಹಾಜರಾತಿ ನಿಯಮಗಳ ಪ್ರಕಾರ ಸಿಜಿಹೆಚ್‌ಎಸ್ ದರಗಳನ್ನು ಮಾತ್ರ ಅನ್ವಯಿಸುವುದರಿಂದ ಟ್ರಸ್ಟಿಗೆ GIA ಬಿಲ್ಲಿನ ಮೂಲಕ ಹಣ ಬಿಡುಗಡೆ ಮಾಡುವ ಬದಲು ಈಗಿರುವ

ವಿಧಾನದಲ್ಲಿಯೇ ಕೆಲವು ಅಂಶಗಳನ್ನು ಸೇರಿಸುವ ಮೂಲಕ ಸ್ವಲ್ಪ ಬದಲಾವಣೆಯೊಂದಿಗೆ ಪೊಲೀಸ್ ಇಲಾಖೆಯ ಆರೋಗ್ಯ ಭಾಗ್ಯ ಯೋಜನೆಯ ಅಡಿ ಪೊಲೀಸ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್‌ಗೆ ಮರುಪಾವತಿ ಜಾರಿ ವಿಧಾನವನ್ನು ಬದಲಾಯಿಸಲು ನಿರ್ಣಯಿಸಿದ್ದು, ಆದ್ದರಿಂದ ಈ ಕೆಳಗಿನಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಒಇ 188 ಪೊಸಿಇ 2015, ದಿನಾಂಕ : 21-07-2016.**

ದಿನಾಂಕ : 01-04-2002ರ ಸರ್ಕಾರಿ ಆದೇಶದಲ್ಲಿ ರಾಜ್ಯ ಪೊಲೀಸ್ ಸಿಬ್ಬಂದಿ ಮತ್ತು ಅಧಿಕಾರಿಗಳ ಅನುಕೂಲಕ್ಕಾಗಿ ಸರ್ಕಾರದ ತಾತ್ವಿಕ ಮಂಜೂರಾತಿಯೊಂದಿಗೆ ಜಾರಿಗೊಳಿಸಲಾಗಿರುವ ಆರೋಗ್ಯ ಭಾಗ್ಯ ಯೋಜನೆಯ ಅಡಿ ಪೊಲೀಸ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್‌ಗೆ ಮರುಪಾವತಿ ಜಾರಿ ವಿಧಾನವನ್ನು ಈ ಕೆಳಗಿನ ಬದಲಾವಣೆಗಳೊಂದಿಗೆ ಜಾರಿಗೊಳಿಸಲು ಆದೇಶಿಸಲಾಗಿದೆ :

I. ಪೊಲೀಸ್ ಸಿಬ್ಬಂದಿಯವರಿಗೆ ಆರೋಗ್ಯ ಭಾಗ್ಯ ಯೋಜನೆಯನ್ನು ಪ್ರತ್ಯೇಕ ಯೋಜನೆಯನ್ನಾಗಿ ಜಾರಿಗೆ ತರುವುದು.

II. ಈ ಯೋಜನೆಗೆ ಅಗತ್ಯವಿರುವ ಅನುದಾನವನ್ನು ನೂತನ ಲೆಕ್ಕ ಶೀರ್ಷಿಕೆ 2055-00-113-0-06 Arogya Bhagya Scheme for Police Forces (NP)-021 Reimbursement of Medical Expenses ಒದಗಿಸಿ, ಸದರಿ ಲೆಕ್ಕ ಶೀರ್ಷಿಕೆಯಡಿ 2016-17ನೇ ಸಾಲಿನ ಪೂರಕ ಅಂದಾಜು – 1ರಲ್ಲಿ ₹. 1.00 ಲಕ್ಷಗಳನ್ನು ಸಾಂಕೇತಿಕ ಅನುದಾನವಾಗಿ ಒದಗಿಸಿದೆ.

III. ಆಸ್ಪತ್ರೆಯಿಂದ ವೈದ್ಯಕೀಯ ವೆಚ್ಚದ ಬಿಲ್ಲುಗಳನ್ನು ಸ್ವೀಕರಿಸಿದ ನಂತರ, ಪೊಲೀಸ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್‌ನಿಂದ ಆಸ್ಪತ್ರೆಗೆ ಪಾವತಿಸಿ, ನಂತರ ಸರ್ಕಾರದಿಂದ ಮರುಪಾವತಿಸಿಕೊಳ್ಳಲು ಕ್ಲೇಮ್‌ನ್ನು ಪ್ರತಿ ಘಟಕಾಧಿಕಾರಿಗಳು ಖಜಾನೆಗೆ ಸಲ್ಲಿಸುವ ಬದಲಾಗಿ ಕೇಂದ್ರ ಕಛೇರಿಯಿಂದ ನೇರವಾಗಿ ಖಜಾನೆಗೆ ಬಿಲ್ಲನ್ನು ಸಲ್ಲಿಸಿ, ಟ್ರಸ್ಟ್ ಹೆಸರಿನಲ್ಲಿ ಚೆಕ್ ಪಡೆಯುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 318 ವೆಚ್ಚ-11 : 2016, ದಿನಾಂಕ : 16-07-2016ರಲ್ಲಿ ಮತ್ತು ಅನಧಿಕೃತ ಟಿಪ್ಪಣಿ ಸಂಖ್ಯೆ : ಆಒ 164 ಆನಿ 2016, ದಿನಾಂಕ : 14-07-2016 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 576**

**S.C. 100**

**ಟಿ.ಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ).

## ಕಂದಾಯ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಮಾಗಡಿ ಗ್ರಾಮದ ಸರ್ವೆ ನಂ. 254ರಲ್ಲಿ 6-25 ಎ/ಗು ಸರ್ಕಾರಿ ಗೋಮಾಳ ಜಮೀನನ್ನು ಕರ್ನಾಟಕ ಪ್ರದೇಶ ಕುರುಬರ ಸಂಘ, ಗಾಂಧಿನಗರ, ಬೆಂಗಳೂರು ಇವರಿಗೆ ಶೈಕ್ಷಣಿಕ ಹಾಗೂ ಕನಕ ಭವನ ನಿರ್ಮಾಣದ ಉದ್ದೇಶಕ್ಕಾಗಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ, ರಾಮನಗರ ಇವರ ಪತ್ರ ಸಂಖ್ಯೆ : ರಾಜಿಕ/ಎಲ್‌ಎನ್‌ಡಿ/ಸಿಆರ್/96/2014-15, ದಿನಾಂಕ : 17-03-2015.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 17-03-2015ರ ಪತ್ರದಲ್ಲಿ ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ ಇವರು ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಮಾಗಡಿ ಗ್ರಾಮದ ಸರ್ವೆ ನಂ. 254ರಲ್ಲಿ ಕ್ಷೇತ್ರ 6-25 ಎ/ಗು ಸರ್ಕಾರಿ ಗೋಮಾಳ ಜಮೀನನ್ನು ಕರ್ನಾಟಕ ಪ್ರದೇಶ ಕುರುಬರ ಸಂಘ, ಗಾಂಧೀನಗರ, ಬೆಂಗಳೂರು ಇವರು ಮಾಗಡಿಯಲ್ಲಿ ಶೈಕ್ಷಣಿಕ ಉದ್ದೇಶಕ್ಕಾಗಿ ಹಾಗೂ ಕನಕ ಭವನ ನಿರ್ಮಾಣದ ಉದ್ದೇಶಕ್ಕಾಗಿ ಮಂಜೂರು ಮಾಡುವ ಕುರಿತು ಪ್ರಸ್ತಾಪಿಸಿದ್ದಾರೆ.

ಮುಂದುವರೆದು, ಮಾಗಡಿ ತಾಲ್ಲೂಕು, ಕಸಬಾ ಹೋಬಳಿ, ಮಾಗಡಿ ಗ್ರಾಮದ ಸ.ನಂ. 254 ರಲ್ಲಿ ಒಟ್ಟು ವಿಸ್ತೀರ್ಣ 7.05 ಎ/ಗು ಜಮೀನು ಸರ್ಕಾರಿ ಗೋಮಾಳವೆಂದು ಕಂದಾಯ ದಾಖಲೆಗಳಲ್ಲಿ ವರ್ಗೀಕರಣಗೊಂಡಿರುತ್ತದೆ. ಈ ಜಮೀನಿನ ಪೈಕಿ 0-20 ಗುಂಟೆ ಜಮೀನಿನಲ್ಲಿ ಆಶ್ರಯ ಯೋಜನೆಯಡಿ ಮನೆಗಳು ನಿರ್ಮಾಣಗೊಂಡಿರುತ್ತವೆ. ಉಳಿಕೆ 6-25 ಎ/ಗು ಜಮೀನು ಖುಲ್ಲಾ ಇದ್ದು, ಸದರಿ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಹಾಗೂ ಕನಕ ಭವನದ ನಿರ್ಮಾಣಕ್ಕಾಗಿ ಮಂಜೂರು ಮಾಡುವ ಕುರಿತು ಕೋರಿದ್ದಾರೆ. ಮುಂದುವರೆದು, ಸ್ಥಳ ಪರಿಶೀಲನೆ ವರದಿ ಪ್ರಕಾರ ಪ್ರಸ್ತಾಪಿತ ಜಮೀನು ಮಾಗಡಿ ಪುರಸಭೆ ವ್ಯಾಪ್ತಿಯಲ್ಲಿ ಬರುತ್ತದೆಂದು, ಸ.ನಂ. 254 ರಲ್ಲಿ ಒಟ್ಟು ವಿಸ್ತೀರ್ಣ 0-20 ಗುಂಟೆ ಜಮೀನಿನಲ್ಲಿ ಆಶ್ರಯ ಯೋಜನೆಯಡಿಯಲ್ಲಿ ನಿವೇಶನ ಮಂಜೂರು ಮಾಡಲಾಗಿದ್ದು, ಸದರಿ ವಿಸ್ತೀರ್ಣವನ್ನು ಹೊರತುಪಡಿಸಿ, ಉಳಿದ 6.25 ಎ/ಗು ಜಮೀನನ್ನು ಪ್ರಸ್ತಾಪಿತ ಸಂಘಕ್ಕೆ ಮಂಜೂರು ಮಾಡಲು ಗ್ರಾಮಸ್ಥರ ತಂಟೆ-ತಕರಾರು ಇರುವುದಿಲ್ಲವೆಂದು ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ ಇವರು ವರದಿ ಮಾಡಿರುತ್ತಾರೆ.

ಕರ್ನಾಟಕ ಪ್ರದೇಶ ಕುರುಬರ ಸಂಘವು ಒಂದು ನೋಂದಾಯಿತ ಸಂಸ್ಥೆಯಾಗಿದ್ದು, ನಿಯಮಾನುಸಾರ, ಸಂಸ್ಥೆಯು ತೃಪ್ತಿಕರವಾಗಿ ಕಾರ್ಯ ನಿರ್ವಹಿಸುತ್ತಿದೆಯೆಂದು, ಹಾಗೂ ಹಣಕಾಸಿನ ಪರಿಸ್ಥಿತಿ ಉತ್ತಮವಾಗಿದೆ ಎಂಬುದರ ರುಜುವಾತಾಗಿ, ಅದೇ ದಿನಾಂಕದಿಂದ ನಿಕಟಪೂರ್ವ ಐದು ವರ್ಷಗಳ ಅವರಿಂದ ಲೆಕ್ಕಪತ್ರ/ಲೆಕ್ಕಪರಿಶೋಧನಾ ವಿವರ ಪತ್ರ ಮತ್ತು ವಾರ್ಷಿಕ ವರದಿಗಳನ್ನು ನೀಡಿರುವುದಾಗಿ ತಿಳಿಸಿರುತ್ತಾರೆ. ಪ್ರಸ್ತಾಪಿತ ಸಂಘವು ಹಿಂದುಳಿದವರ್ಗಗಳ ಶ್ರೇಯೋಭಿವೃದ್ಧಿಗಾಗಿ ಶ್ರಮಿಸುತ್ತಿದ್ದು, ಆ ಭಾಗದ ಮಕ್ಕಳಿಗೆ ಶಿಕ್ಷಣ ನೀಡುವ ಉದ್ದೇಶಗಳಿಗಾಗಿ ಶಾಲಾ ಕಾಲೇಜು ತೆರೆಯಲು, ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಕನಕಭವನ ನಿರ್ಮಾಣ ಮಾಡಲು ಉದ್ದೇಶಿಸಿದೆಯೆಂದು ವರದಿಯಲ್ಲಿ ತಿಳಿಸಲಾಗಿದೆ.

ಮುಂದುವರೆದು, ಜಿಲ್ಲಾಧಿಕಾರಿಗಳ ವರದಿಯಂತೆ, ಪ್ರಸ್ತಾಪಿತ ಜಮೀನು ಮಾಗಡಿ ಪುರಸಭೆಯಿಂದ 1 ಕಿ.ಮೀ. ದೂರದಲ್ಲಿದ್ದು, ಪಟ್ಟಣಕ್ಕೆ ಹೊಂದಿಕೊಂಡಿರುತ್ತದೆ. ಮಾಗಡಿ ಗ್ರಾಮದಲ್ಲಿ ಇರುವ ಜಾನುವಾರುಗಳ ಸಂಖ್ಯೆಗಿಂತ ಗೋಮಾಳದ ವಿಸ್ತೀರ್ಣ ಕಡಿಮೆ ಇರುವುದಾಗಿ ತಿಳಿಸಲಾಗಿದ್ದು, ಮಂಜೂರಾತಿಗಾಗಿ ಕೋರಿರುವ ಜಮೀನು ಕಲ್ಲುಬಂಡೆಗಳಿಂದ ಕೂಡಿದ್ದು, ದನ-ಕರಗಳ ಮೇವಿಗೆ ಯೋಗ್ಯವಾದ ಜಮೀನಾಗಿರುವುದಿಲ್ಲವೆಂದು ವರದಿಯಲ್ಲಿ ತಿಳಿಸಲಾಗಿದೆ. ಪ್ರಸ್ತಾಪಿತ ಜಮೀನನ್ನು ಮಂಜೂರಾತಿ ನೀಡಲು ಪರಿಗಣಿಸಿದಲ್ಲಿ, ನಿಯಮಾನುಸಾರ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಮಂಜೂರು ಮಾಡಲು ಅವಕಾಶವಿರುತ್ತದೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 132 ಎಲ್‌ಜಿಬಿ 2015, ಬೆಂಗಳೂರು, ದಿನಾಂಕ : 13–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಕಸಬಾ ಹೋಬಳಿ, ಮಾಗಡಿ ಗ್ರಾಮದ ಸರ್ವೆ ನಂ. 254 ರಲ್ಲಿ ವಿಸ್ತೀರ್ಣ 6–25 ಎ/ಗು ಸರ್ಕಾರಿ ಗೋಮಾಳ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು, 1966ರ ನಿಯಮ 97(4)ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಪ್ರದೇಶ ಕುರುಬರ ಸಂಘ, ಗಾಂಧಿನಗರ, ಬೆಂಗಳೂರು ಇವರಿಗೆ ಶೈಕ್ಷಣಿಕ ಹಾಗೂ ಕನಕ ಭವನದ ನಿರ್ಮಾಣದ ಉದ್ದೇಶಕ್ಕಾಗಿ ಕರ್ನಾಟಕ ಭೂಮಂಜೂರಾತಿ ನಿಯಮಗಳು, 1969ರ ನಿಯಮ 22–ಎ ಅನ್ವಯ ಪ್ರಚಲಿತ ಮಾರುಕಟ್ಟೆ ಮೌಲ್ಯವನ್ನು ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಮತ್ತು ಈ ಕೆಳಕಂಡ ಷರತ್ತುಗಳೊಂದಿಗೆ ಮಂಜೂರು ಮಾಡಿ ಆದೇಶಿಸಿದೆ.

1. ಜಮೀನು ಹಸ್ತಾಂತರ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ ಇವರು ನಿಯಮಾನುಸಾರ ನಿರ್ವಹಿಸುವುದು.
2. ಸದರಿ ಜಮೀನನ್ನು ಯಾವ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿದೆಯೋ, ಅದೇ ಉದ್ದೇಶಕ್ಕೆ ಮಾತ್ರ ಹಾಗೂ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸಿಕೊಳ್ಳತಕ್ಕದ್ದು.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
6. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

**P.R. 577** ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**S.C. 100** **ಎಸ್.ಎಲ್. ಮಹಾಂತೇಗೌಡ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ–1).

## ಕಂದಾಯ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕಿನ ತಮದಡ್ಡಿ ಪುನರ್ವಸತಿ ಕೇಂದ್ರದ ನಿರ್ಮಾಣಕ್ಕಾಗಿ ಹಳಿಂಗಳಿ ಗ್ರಾಮದ ರಿ.ಸ.ನಂ. 142/ಅ ರಲ್ಲಿ 89 ಎಕರೆ 34 ಗುಂಟೆ ಜಮೀನನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತ, ಹಿಪ್ಪರಗಿ ಅಣೆಕಟ್ಟು ಯೋಜನೆ, ಅಥಣಿ ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ಸಂಖ್ಯೆ : ಪ್ರಾಆಬೆ : ಭೂಮಿ–4 : ಎಲ್‌ಜಿಎಲ್ : ವಿವ : 48 : 2014–15, ದಿನಾಂಕ : 04–02–2016.

**ಪ್ರಸ್ತಾವನೆ :**

ಮೇಲೆ ಓದಲಾದ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ದಿನಾಂಕ : 04–02–2016ರ ಪತ್ರದಲ್ಲಿ ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕಿನ ತಮದಡ್ಡಿ ಪುನರ್ವಸತಿ ಕೇಂದ್ರದ ನಿರ್ಮಾಣಕ್ಕಾಗಿ ಹಳಿಂಗಳಿ ಗ್ರಾಮದ ರಿ.ಸ.ನಂ. 142/ಅ ರಲ್ಲಿ 89 ಎಕರೆ 34 ಗುಂಟೆ ಜಮೀನನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತ, ಹಿಪ್ಪರಗಿ ಅಣೆಕಟ್ಟು ಯೋಜನೆ, ಅಥಣಿ ಇವರಿಗೆ ಮಂಜೂರು ಮಾಡುವ ಕುರಿತು ಪ್ರಸ್ತಾಪಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಬೆಳಗಾವಿ ಇವರು ತಮ್ಮ ದಿನಾಂಕ : 29–10–2015ರ ಪತ್ರದಲ್ಲಿ ಕೃಷ್ಣಾ ನದಿಯ ನೆರೆ ಹಾವಳಿಯಿಂದ ಬಾಧಿತಗೊಳ್ಳುತ್ತಿರುವ ಜಮಖಂಡಿ ತಾಲ್ಲೂಕಿನ ಹಳಿಂಗಳಿ ಗ್ರಾಮವನ್ನು ಸಂಪೂರ್ಣವಾಗಿ ಸ್ಥಳಾಂತರಿಸಲು ಸರ್ಕಾರದ ಪತ್ರ ಸಂಖ್ಯೆ : **ಆರ್‌ಡಿ 81 ಎಲ್‌ಜಿಜೆ 2006**, ದಿನಾಂಕ : 21–08–2007ರಲ್ಲಿ ಹಳಿಂಗಳಿ ಗ್ರಾಮದ ಮುಫತ್ ಗಾಯರಾಣ ರಿ.ಸ.ನಂ. 142/ಅ ರಲ್ಲಿ 246–10 ಎಕರೆ ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 97(4)ರಡಿ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 71 ರಡಿ ಕಾಯ್ದಿರಿಸಲಾಗಿರುತ್ತದೆ. ಆದರೆ ಹಳಿಂಗಳಿ ಗ್ರಾಮಕ್ಕೆ ಪರ್ಯಾಯವಾಗಿ ರಸ್ತೆ ಸಂಪರ್ಕ ಕಲ್ಪಿಸಿ ಹಳಿಂಗಳಿ ಗ್ರಾಮದ ಸ್ಥಳಾಂತರ ಪ್ರಕ್ರಿಯೆಯನ್ನು ಕೈಬಿಟ್ಟಿರುವುದರಿಂದ ಹಾಗೂ ಸದರಿ ಜಮೀನು ಕಂದಾಯ ಇಲಾಖೆಯ ಕಬ್ಜೆಯಲ್ಲಿದ್ದು, ಬೇರೆ ಯಾವುದೇ ಉದ್ದೇಶಕ್ಕಾಗಿ ಇಲಾಖೆಗೆ ಬಳಕೆ ಆಗದೇ ಇರುವುದರಿಂದ ಮತ್ತು ಈ ಜಮೀನಿನ ಪೈಕಿ 89–34 ಎ/ಗುಂ ಜಮೀನನ್ನು ತಮದಡ್ಡಿ ಗ್ರಾಮದ ಪುನರ್ವಸತಿ ಕೇಂದ್ರಕ್ಕಾಗಿ ಮಂಜೂರು ಮಾಡುವಂತೆ ಕರ್ನಾಟಕ ನೀರಾವರಿ ನಿಗಮ, ಹಿಪ್ಪರಗಿ ಅಣೆಕಟ್ಟು ಯೋಜನೆ ಇವರು ಕೋರಿರುವುದರಿಂದ ಈಗಾಗಲೇ ಸರ್ಕಾರವು ಹಳಿಂಗಳಿ ಗ್ರಾಮವನ್ನು ಸಂಪೂರ್ಣವಾಗಿ ಸ್ಥಳಾಂತರಿಸಲು ಕಾಯ್ದಿರಿಸಲು ಅನುಮೋದನೆ ನೀಡಿರುವುದನ್ನು ಕೈಬಿಡಲು ಕೋರಿರುತ್ತಾರೆ.

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಕರ್ನಾಟಕ ನೀರಾವರಿ ನಿಗಮ ನಿಯಮಿತ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಉಪವಿಭಾಗ, ಜಮಖಂಡಿ ಇವರು ದಿನಾಂಕ : 08–12–2014 ರಂದು ತಹಶೀಲ್ದಾರ್ ಜಮಖಂಡಿ ಇವರಿಗೆ ಪತ್ರ ಬರೆದು ಹಿಪ್ಪರಗಿ ಅಣೆಕಟ್ಟು ಯೋಜನೆಯ ಹಿನ್ನೀರಿನಿಂದ ತಮದಡ್ಡಿ ಗ್ರಾಮವು ಸಂಪೂರ್ಣವಾಗಿ ಮುಳುಗಡೆಯಾಗಿದೆ ಎಂದು ಘೋಷಿಸಿ ಗ್ರಾಮದ ಕಟ್ಟಡದ ಮಾಲೀಕರಿಗೆ ಪರಿಹಾರ ಧನ

ವಿತರಿಸಲಾಗಿದ್ದು, ಗ್ರಾಮವನ್ನು ಕಡ್ಡಾಯವಾಗಿ ಸ್ಥಳಾಂತರಿಸಬೇಕಾಗಿರುವುದರಿಂದ ತಮದಡ್ಡಿ ಗ್ರಾಮದ ಸಂತ್ರಸ್ತರಿಗೆ ಹಳಿಂಗಳಿ ಗ್ರಾಮದ ಸರ್ಕಾರಿ ರಿ.ಸ.ನಂ. 142/ಅ ರಲ್ಲಿ 89–34 ಎಕರೆ ಸರ್ಕಾರಿ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರು ತಮ್ಮ ದಿನಾಂಕ :04–02–2016ರ ಪತ್ರದಲ್ಲಿ ಕೃಷ್ಣಾ ನದಿಯ ನೆರೆ ಹಾವಳಿಯಿಂದ ಬಾಧಿತಗೊಳ್ಳುತ್ತಿರುವ ಜಮಖಂಡಿ ತಾಲ್ಲೂಕಿನ ಹಳಿಂಗಳಿ ಗ್ರಾಮವನ್ನು ಸ್ಥಳಾಂತರಿಸುವ ಕುರಿತಂತೆ 246 ಎಕರೆ 10 ಗುಂಟೆ ಜಮೀನನ್ನು ಕಾಯ್ದಿರಿಸಿ ಹೊರಡಿಸಿದ್ದ ಆದೇಶವನ್ನು ಹಿಂಪಡೆಯುವ ಬಗ್ಗೆ ಸರ್ಕಾರದ ಆದೇಶವನ್ನು ನಿರೀಕ್ಷಿಸಿ, ಹಳಿಂಗಳಿ ಗ್ರಾಮದ ಸ್ಥಳಾಂತರಕ್ಕಾಗಿ ಈಗಾಗಲೇ ಕಾಯ್ದಿರಿಸಿದ್ದ ಕ್ಷೇತ್ರ 246 ಎಕರೆ 10 ಗುಂಟೆ ಜಮೀನಿನ ಪೈಕಿ 89 ಎಕರೆ 34 ಗುಂಟೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 20(1) & (2)ರನ್ವಯ ಪ್ರಚಲಿತ ಮಾರುಕಟ್ಟೆ ಬೆಲೆಯ ಶೇ. 50ರಷ್ಟು ದರ ವಿಧಿಸಿ ಕರ್ನಾಟಕ ನೀರಾವರಿ ನಿಗಮ ನಿಯಮಿತ, ಹಿಪ್ಪರಗಿ ಅಣೆಕಟ್ಟು ಯೋಜನೆ, ಅಥಣಿ ಇವರಿಗೆ ಮಂಜೂರು ಮಾಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 9 ಎಲ್‌ಜಿಜಿ 2016, ಬೆಂಗಳೂರು, ದಿನಾಂಕ : 09–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ 81 ಎಲ್‌ಜಿಜಿ 2006, ದಿನಾಂಕ : 21–08–2007ರನ್ವಯ, ಹಳಿಂಗಳಿ ಗ್ರಾಮದ ರಿ.ಸ.ನಂ. 142ರಲ್ಲಿ 246–10 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 71ರಡಿ ಹಳಿಂಗಳಿ ಗ್ರಾಮದ ನೆರೆ ಸಂತ್ರಸ್ಥರಿಗಾಗಿ ಕಾಯ್ದಿರಿಸಲಾಗಿರುವ ಆದೇಶವನ್ನು ಕೈಬಿಡಲು ಹಾಗೂ ಹಿಪ್ಪರಗಿ ಹಿನ್ನೀರಿನಿಂದ ಬಾಧಿತವಾಗಿರುವ ತಮದಡ್ಡಿ ಗ್ರಾಮದ ಪುನರ್‌ವಸತಿ ಕೇಂದ್ರಕ್ಕಾಗಿ ಹಳಿಂಗಳಿ ಗ್ರಾಮದ ರಿ.ಸ.ನಂ. 142/ಅ ರಲ್ಲಿನ ವಿಸ್ತೀರ್ಣ 246–10 ಎ/ಗುಂ ಜಮೀನಿನ ಪೈಕಿ 89–34 ಎ/ಗುಂ ಜಮೀನನ್ನು ಸರ್ಕಾರವು ಉಚಿತವಾಗಿ ಕರ್ನಾಟಕ ನೀರಾವರಿ ನಿಗಮ ನಿಯಮಿತ, ಹಿಪ್ಪರಗಿ ಅಣೆಕಟ್ಟು ಯೋಜನೆ, ಅಥಣಿ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು :**

1. ಜಮೀನು ಹಸ್ತಾಂತರ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆ ಇವರು ನಿಯಮಾನುಸಾರ ನಿರ್ವಹಿಸಲು ನಿರ್ದೇಶಿಸಿದೆ.
2. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ, ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
3. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
4. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲಿ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು. ಹಾಗೂ ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
5. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಆರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
6. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ, ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೆ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

**P.R. 578** ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**S.C. 25** **ರೇವಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ–3).

## ಕಂದಾಯ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆ, ಜೋಯಿಡಾ ತಾಲ್ಲೂಕು, ಉಳವಿ ಶ್ರೀ ಚನ್ನಬಸವೇಶ್ವರಸ್ವಾಮಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 77 ಮುಸೇವಿ 2003, ದಿನಾಂಕ : 30–04–2003.

2) ಸರ್ಕಾರದ ಆದೇಶ ಸಂಖ್ಯೆ : ಕಂಇ 41 ಮುಅಬಿ 2003, ದಿನಾಂಕ : 20–02–2004.

3) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ :ಎಡಿಎಂ 5 ಸಿಆರ್ 24/2003–04, ದಿನಾಂಕ : 24–06–2016.

ಪ್ರಸ್ತಾವನೆ :

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಉತ್ತರ ಕನ್ನಡ ಜಿಲ್ಲೆ, ಜೋಯಿಡಾ ತಾಲ್ಲೂಕು, ಉಳವಿ ಶ್ರೀ ಚನ್ನಬಸವೇಶ್ವರಸ್ವಾಮಿ ದೇವಾಲಯವು ಹಿಂದಿನ ಬಿ.ಪಿ.ಟಿ.ಕಾಯ್ದೆ 1950 ರಡಿಯಲ್ಲಿ ನೋಂದಾಯಿತ ಸಂಸ್ಥೆಯಾಗಿದ್ದರನ್ವಯ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಸೆಕ್ಷನ್ 23 ರಡಿಯಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆಗೊಳಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸದರಿ ದೇವಾಲಯವು ವೀರಶೈವ ಪಂಥದ ಧರ್ಮೋಪದೇಶ ಮತ್ತು ಬೋಧನೆ, ಧಾರ್ಮಿಕ ಶಿಕ್ಷಣ ಹಾಗೂ ತರಗತಿಯನ್ನು ನೀಡುತ್ತಿದ್ದು, ಇದೊಂದು ವೀರಶೈವ ಪಂಥದವರು ನಡೆಸಿಕೊಂಡು ಬರುತ್ತಿರುವ ದೇವಾಲಯವಾಗಿರುವುದರಿಂದ ಕಾಯ್ದೆಯ ಅಧ್ಯಾಯ-Iರ ಕಲಂ 4(ii) ರಂತೆ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ವಿನಾಯಿತಿ ನೀಡಬೇಕೆಂದು ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಇವರು ದಿನಾಂಕ : 06–12–2003 ರಲ್ಲಿ ಪ್ರಸ್ತಾವನೆ ಸಲ್ಲಿಸಿದ್ದರ ಮೇರೆಗೆ, ಸದರಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ : ಕಂಇ 41 ಮುಆಬಿ 2003, ದಿನಾಂಕ : 20–02–2004 ಅನ್ನು ಪ್ರಶ್ನಿಸಿ ಶ್ರೀ ಎಂ. ಜಯಕುಮಾರ್ ಹಾಗೂ ಇತರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂ : 34690/2004 ಅನ್ನು ದಾಖಲ್ಮಾಡಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ಸದರಿ ಪ್ರಕರಣವನ್ನು ದಿನಾಂಕ : 21–01–2006 ರಂದು ಇತ್ಯರ್ಥಪಡಿಸಿ ಸರ್ಕಾರದ ದಿನಾಂಕ : 20–02–2004ರ ಆದೇಶವನ್ನು ತಳ್ಳಿ ಹಾಕಿ ನಿಯಮಾನುಸಾರ ಅರ್ಜಿದಾರರಿಗೆ ಸೂಕ್ತ ಅವಕಾಶ ನೀಡಿ ಮುಂದಿನ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶನ ನೀಡಿರುತ್ತದೆ.

ಮಾನ್ಯ ಉಚ್ಚ ನ್ಯಾಯಾಲಯದ ದಿನಾಂಕ : 21–01–2006ರ ಆದೇಶವನ್ನು ಪ್ರಶ್ನಿಸಿ ಶ್ರೀ ಉಳವಿ ಚನ್ನಬಸವೇಶ್ವರ ದೇವಾಸ್ಥಾನದ ಟ್ರಸ್ಟಿಗಳು ಮಾನ್ಯ ಉಚ್ಚ ನ್ಯಾಯಾಲಯದ ವಿಭಾಗಿಯ ಪೀಠದಲ್ಲಿ ರಿಟ್ ಅಪೀಲ್ ಸಂಖ್ಯೆ : 331/2008 ದಾಖಲು ಮಾಡಿರುತ್ತಾರೆ. ಸದರಿ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ : 13–06–2008 ರಂದು ಮಧ್ಯಂತರ ಆದೇಶದಲ್ಲಿ ತಡೆಯಾಜ್ಞೆ ನೀಡಿ, ಸದರಿ ತಡೆಯಾಜ್ಞೆಯು ಸರ್ಕಾರವು ಧಾರ್ಮಿಕ ದತ್ತಿ ಆಯುಕ್ತರವರ ವರದಿಯಾಧಾರದಲ್ಲಿ ಸದರಿ ವಿಚಾರದ ಬಗ್ಗೆ ಮರು ಪರಿಶೀಲಿಸುವ ಕ್ರಮಕ್ಕೆ ಅಡ್ಡಿಯಾಗುವುದಿಲ್ಲವೆಂದು ಸ್ಪಷ್ಟಪಡಿಸಿರುತ್ತದೆ. ಮಾನ್ಯ ಉಚ್ಚ ನ್ಯಾಯಾಲಯದ ಮಧ್ಯಂತರ ಆದೇಶದ ಉದ್ಧೃತ ಭಾಗವು ಕೆಳಕಂಡಂತಿರುತ್ತದೆ.

> **“The operation of the impugned order dated : 21-01-2008 passed by the learned single judge in writ petition No. 34690/2004 is Stayed only to the extent it quashed the order dated : 20-02-2004 of the Government. It is made clear that the stay order will not operate against the reconsideration of the issue by the Government on the basis of the report of the Endownment Commissioner.”**

ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂ : 34690/2004 ರಲ್ಲಿ ನೀಡಿರುವ ನಿರ್ದೇಶನದಂತೆ ದೇವಾಲಯದ ಟ್ರಸ್ಟಿಗಳಿಗೆ ಅವಕಾಶ ನೀಡಿ ಅಹವಾಲನ್ನು ಸ್ವೀಕರಿಸಿ ಸರ್ಕಾರದ ಕಾರ್ಯದರ್ಶಿಯವರ ನ್ಯಾಯಾಲಯದಲ್ಲಿ ವಿಚಾರಣೆ ನಡೆಸಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿಕೊಳ್ಳುವ/ಹೊರತುಪಡಿಸುವ ಬಗ್ಗೆ ರಾಜ್ಯ ಧಾರ್ಮಿಕ ಪರಿಷತ್‌ನ ಸಭೆಯಲ್ಲಿ ಮಂಡಿಸಿ ನಿಯಮಾನುಸಾರ ತೀರ್ಮಾನ ಕೈಗೊಳ್ಳಲು ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ದಿನಾಂಕ : 11–10–2012ರಲ್ಲಿ ನಿರ್ದೇಶನ ನೀಡಲಾಗಿರುತ್ತದೆ. ಅದರಂತೆ ದಿನಾಂಕ : 09–11–2012ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ಪ್ರಸ್ತಾವನೆಯನ್ನು ಮಂಡಿಸಲಾಗಿ, ರಾಜ್ಯ ಧಾರ್ಮಿಕ ಪರಿಷತ್ತಿನ ನ್ಯಾಯಾಧೀಕರಣದಲ್ಲಿ ವಿಚಾರಣೆಯನ್ನು ನಡೆಸಲು ತೀರ್ಮಾನಿಸಲಾಗಿರುತ್ತದೆ. ಅದರಂತೆ ನ್ಯಾಯಾಧೀಕರಣದಲ್ಲಿ ವಿಚಾರಣೆಯನ್ನು ಕೈಗೆತ್ತಿಕೊಳ್ಳಲಾಗಿದ್ದು, ಸದರಿ ಪ್ರಕರಣದಲ್ಲಿ ಉಳವಿ ಶ್ರೀ ಚನ್ನಬಸವೇಶ್ವರ ಟ್ರಸ್ಟ್ ಕಮಿಟಿಯ ಅಧ್ಯಕ್ಷರು ಅಪೀಲುದಾರರಾಗಿರುತ್ತಾರೆ. ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಯನ್ನು ದಾಖಲಿಸಿದ ರಿಟ್ ಅರ್ಜಿದಾರರಾದ ಶ್ರೀ ಪಿ. ವೀರೇಂದ್ರಕುಮಾರ್ ಹಾಗೂ ಇತರ ಇಬ್ಬರು ಪ್ರತಿವಾದಿಗಳಾಗಿರುತ್ತಾರೆ. ದಿನಾಂಕ : 04–04–2015ರಂದು ಅಪೀಲುದಾರರ ಪರ ವಕೀಲರು ದಾಖಲಿಸಿದ ಮೆಮೋ ಅರ್ಜಿಯನ್ನು ಪರಿಗಣಿಸಿ ನ್ಯಾಯಾಧೀಕರಣವು ಕೆಳಕಂಡಂತೆ ಆದೇಶ ನೀಡಿರುತ್ತದೆ.

> **“Memo filed by KPN seeking permission to withdraw the case reserving to revive the case if necessary. Permission granted and case is closed.”**

ಉಳವಿ ಶ್ರೀ ಚನ್ನಬಸವೇಶ್ವರ ಟ್ರಸ್ಟ್ ಕಮಿಟಿಯ ಅಧ್ಯಕ್ಷರು ದಿನಾಂಕ : 21–02–2016 ರಂದು ಮಾನ್ಯ ಮುಜರಾಯಿ ಸಚಿವರಿಗೆ ಮನವಿ ಸಲ್ಲಿಸಿ,, ಸದರಿ ದೇವಾಲಯವು 12ನೇ ಶತಮಾನದ ಶ್ರೀ ಚನ್ನಬಸವೇಶ್ವರ ಇವರ ಸಮಾಧಿಯ ಗದ್ದುಗೆ ಇರುವ ದೇವಾಲಯವಾಗಿದ್ದು, ವೀರಶೈವರ ಪುಣ್ಯಕ್ಷೇತ್ರವಾಗಿರುತ್ತದೆ. ವೀರಶೈವ ಪಂಥದ ಧರ್ಮೋಪದೇಶ ಮತ್ತು ಬೋಧನೆ, ಧಾರ್ಮಿಕ ಶಿಕ್ಷಣ ತರಬೇತಿ ನೀಡಲಾಗುತ್ತಿದ್ದು,ಇದು 1932ರ ಪೂರ್ವದಲ್ಲಿಯ ಸಂಸ್ಥಾಪಕ ಅಧ್ಯಕ್ಷರಾಗಿ ಶ್ರೀ ರಾವು ಸಾಹೇಬ ಅಡಿವೆಪ್ಪ ಚನ್ನಪ್ಪ ಕಿತ್ತೂರ ಇವರು ಶ್ರೀ ಉಳವಿ ಚನ್ನಬಸವೇಶ್ವರ ಟೆಂಪಲ್ ಕಮಿಟಿ (Under the provision of religious endownment Act of 1863 formerly applicable to North Canara) ಸ್ಥಾಪಿಸಿ ಮುಂದೆ ಬಿಪಿಟಿ ಕಾಯ್ದೆ 1950 ಅಡಿಯಲ್ಲಿ ಶ್ರೀ ಉಳವಿ ಚನ್ನಬಸವೇಶ್ವರ ಟ್ರಸ್ಟ್ ಕಮಿಟಿ 1954 ರಲ್ಲಿ ನೋಂದಣಿ ಮಾಡಿಸಿ 1974 ರವರೆಗೆ Raosaheb AC Kittur ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ಇದು ಒಂದು ವೀರಶೈವ (ಲಿಂಗಾಯಿತ) ಪಂಗಡದವರು ಸ್ಥಾಪಿಸಿ ನಡೆಸಿಕೊಂಡು ಬರುತ್ತಿರುವ ದೇವಸ್ಥಾನವಾಗಿರುವುದರಿಂದ ಸರ್ಕಾರದ ದಿನಾಂಕ : 20–02–2004ರ ಆದೇಶದಲ್ಲಿ ಸದರಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿರುವುದನ್ನು ಖಾಯಂಗೊಳಿಸುವಂತೆ ಕೋರಿರುತ್ತಾರೆ.

ಮಾನ್ಯ ಉಚ್ಚ ನ್ಯಾಯಾಲದ ದಿನಾಂಕ : 21–01–2006ರ ಆದೇಶದಂತೆ ಸರ್ಕಾರವು ಮರು ಪರಿಶೀಲಿಸಬೇಕಾಗಿರುತ್ತದೆ. ಆದರೆ, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ತಿದ್ದುಪಡಿ ಅಧಿನಿಯಮ 2011 ರ ಸೆಕ್ಷನ್ 20(ಎ) ರನ್ವಯ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆಗೊಳಿಸುವ ಅಥವಾ ತೆಗೆದು ಹಾಕುವ ಅಧಿಕಾರವು ರಾಜ್ಯ ಧಾರ್ಮಿಕ ಪರಿಷತ್ತಿಗೆ ಇರುತ್ತದೆ.

ಪ್ರಸ್ತಾಪಿತ ದೇವಾಲಯವು ಈ ಹಿಂದಿನ ಬಿ.ಪಿ.ಟಿ ಕಾಯ್ದೆ 1950 ರಡಿಯಲ್ಲಿ ಸಾರ್ವಜನಿಕ ಸಂಸ್ಥೆಯಾಗಿದ್ದು, ಸದರಿ ಸಂಸ್ಥೆಗೆ ವಾರ್ಷಿಕ ₹. 6,000/–ಗಳ ತಸ್ತೀಕ ಭತ್ಯೆ ಹಾಗೂ ₹. 1728/–ಗಳ ವರ್ಷಾಸನ ಭತ್ಯೆ ನಿಗದಿಯಾಗಿರುತ್ತದೆ. ಇಂಡಿಯನ್ ಟ್ರಸ್ಟ್ ಕಾಯ್ದೆಯಡಿಯಲ್ಲಿ

ದಿನಾಂಕ: 22–11–2004ರಂದು ಸದರಿ ಸಂಸ್ಥೆಗೆ ಉಳವಿ ಶ್ರೀ ಚನ್ನಬಸವೇಶ್ವರ ಟ್ರಸ್ಟ್‌ನ್ನು ರಚಿಸಿಕೊಂಡು ದಿ॥ ರಾವ್‌ಸಾಹೇಬ ಶ್ರೀ ಅಡಿವೆಪ್ಪ ಚನ್ನಪ್ಪ ಕಿತ್ತೂರ ಇವರ ವಂಶಸ್ಥರು ಹಾಗೂ ಕುಟುಂಬದವರು ಖಾಯಂ ಟ್ರಸ್ಟಿಗಳಾಗಿರುತ್ತಾರೆ.

ಸರ್ಕಾರದ ಆದೇಶ ಸಂಖ್ಯೆ : ಕಂಇ 41 ಮುಅಬಿ 2003 ದಿನಾಂಕ : 20–02–2004ರ ಅನ್ವಯ ಸದರಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿದ ನಂತರ ಸದರಿ ದೇವಾಲಯಕ್ಕೆ ರಚಿಸಿಕೊಂಡಿರುವ ಶ್ರೀ ಚನ್ನಬಸವೇಶ್ವರ ಟ್ರಸ್ಟ್ ಕಮಿಟಿಯ ನಿಯಮಾವಳಿಗಳಲ್ಲಿ ವೀರಶೈವ ಪಂಥದ ಧರ್ಮೋಪದೇಶ ಮತ್ತು ಬೋಧನೆ, ಧಾರ್ಮಿಕ ಶಿಕ್ಷಣ, ಅನ್ನದಾಸೋಹ, ಜಾತ್ರೆ, ದೀನ, ದಲಿತ ವರ್ಗದ ಜನರಿಗೆ ಉಚಿತ ಶಿಕ್ಷಣ ಹಾಗೂ ಉಚಿತ ವೈದ್ಯಕೀಯ ನೆರವು ಇತ್ಯಾದಿ ಧ್ಯೇಯೋದ್ದೇಶಗಳನ್ನು ಸಂಸ್ಥೆಯು ಹೊಂದಿರುತ್ತದೆ.

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ, ಈ ವಿಚಾರದ ಬಗ್ಗೆ ತೀರ್ಮಾನಕ್ಕಾಗಿ ದಿನಾಂಕ : 23–05–2016 ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ಪ್ರಸ್ತಾವನೆಯನ್ನು ಮಂಡಿಸಲಾಗಿರುತ್ತದೆ. ಈ ಬಗ್ಗೆ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ಚರ್ಚಿಸಿ ಉಳವಿ ಶ್ರೀ ಚನ್ನಬಸವೇಶ್ವರಸ್ವಾಮಿ ದೇವಾಲಯವು ವೀರಶೈವ (ಲಿಂಗಾಯಿತ) ಪಂಗಡದವರು ಸ್ಥಾಪಿಸಿ ವ್ಯವಸ್ಥೆಗೊಳಿಸಿ, ಅದೇ ಪಂಗಡ ಸದಸ್ಯರನ್ನೊಳಗೊಂಡ ಟ್ರಸ್ಟ್‌ನಿಂದ ನಿರ್ವಹಿಸುತ್ತಿರುವ ಧಾರ್ಮಿಕ ಸಂಸ್ಥೆಯಾಗಿದ್ದು, ವೀರಶೈವ ಪಂಥದ ಧರ್ಮೋಪದೇಶ ಮತ್ತು ಬೋಧನೆ, ಧಾರ್ಮಿಕ ಶಿಕ್ಷಣ ಹಾಗೂ ತರಬೇತಿಯನ್ನು ನೀಡುತ್ತಿರುವುದು ಕಂಡುಬಂದಿದ್ದು, ಸರ್ಕಾರವು ಈ ಹಿಂದೆ ಈ ದೇವಾಲಯವನ್ನು ಕಾಯ್ದೆಯ ಅಧ್ಯಾಯ 1ರ ಸೆಕ್ಷನ್ 4(ii)ರ ಅನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿರುವುದು ಕ್ರಮಬದ್ಧವಾಗಿರುವುದರಿಂದ, ಸದರಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆಗೊಳಿಸದೆ, ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿರುವ ಆದೇಶವನ್ನು ಖಾಯಂಗೊಳಿಸುವುದು ಸೂಕ್ತವೆಂದು ಸಭೆಯಲ್ಲಿ ನಿರ್ಣಯಿಸಲಾಗಿರುತ್ತದೆ. ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯ ನಿರ್ಣಯದಂತೆ ಪ್ರಸ್ತಾಪಿತ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆಗೊಳಿಸದೆ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿರುವ ಸರ್ಕಾರದ ಆದೇಶ ಸಂಖ್ಯೆ : ಕಂಇ 41 ಮುಅಬಿ 2003 ದಿನಾಂಕ : 20–02–2004ನ್ನು ಖಾಯಂಗೊಳಿಸಿ ಆದೇಶ ಹೊರಡಿಸುವಂತೆ ಕೋರಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 40 ಮುಅಬಿ 2016, ಬೆಂಗಳೂರು, ದಿನಾಂಕ : 09ನೇ ಆಗಸ್ಟ್ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ : 23–05–2016ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ನಿರ್ಣಯದಂತೆ, ಉತ್ತರ ಕನ್ನಡ ಜಿಲ್ಲೆ, ಜೋಯಿಡಾ ತಾಲ್ಲೂಕು, ಉಳವಿ ಶ್ರೀ ಚನ್ನಬಸವೇಶ್ವರ ಸ್ವಾಮಿ ದೇವಾಲಯವು ವೀರಶೈವ (ಲಿಂಗಾಯಿತ) ಪಂಗಡದವರು ಸ್ಥಾಪಿಸಿ ನಡೆಸಿಕೊಂಡು ಬರುತ್ತಿರುವ ದೇವಸ್ಥಾನವಾಗಿರುವುದರಿಂದ ಸದರಿ ದೇವಸ್ಥಾನವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧ್ಯಾಯ–1ರ ಕಲಂ 4(ii)ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿರುವ ಸರ್ಕಾರದ ಆದೇಶ ಸಂಖ್ಯೆ : ಕಂಇ 41 ಮುಅಬಿ 2003 ದಿನಾಂಕ : 20–02–2004ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಖಾಯಂಗೊಳಿಸಿ ಆದೇಶಿಸಿದೆ.

P.R. 579 ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

S.C. 50 **ಬಿ.ಎಸ್. ನಾಗರತ್ನಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ).

**ಸಹಕಾರ ಸಚಿವಾಲಯ**

**ಸೇರ್ಪಡೆ**

**ಸಂಖ್ಯೆ: ಸಿಒ 244 ಸಿಎಲ್‌ಎಸ್ 2016 ಬೆಂಗಳೂರು, ದಿನಾಂಕ: 08–08–2016**

ಸರ್ಕಾರದ ಆದೇಶ ಸಂಖ್ಯೆ: ಸಿಒ 244 ಸಿಎಲ್‌ಎಸ್ 2016, ದಿನಾಂಕ: 16–05–2016 ಆದೇಶ ಭಾಗದ, ಮೊದಲನೇ ಷರತ್ತಿನಲ್ಲಿ **"ಈ ಯೋಜನೆಯನ್ನು ದಿನಾಂಕ: 01–04–2016 ರಿಂದ ಗೊತ್ತುಪಡಿಸಿದ ಪತ್ತಿನ ಸಹಕಾರಿ ಸಂಸ್ಥೆಗಳು ಅಂದರೆ"** ಎಂಬ ಪದಗಳ ನಂತರ **"ಎಲ್ಲಾ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು"** ಎಂಬ ಪದಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು, ಉಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 564 **ಕೆ. ರಾಧಾಕೃಷ್ಣ,**

SC-100 ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಹಕಾರ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ:** 2016–17ನೇ ಸಾಲಿನಲ್ಲಿ ಭಾಗ್ಯಜ್ಯೋತಿ /ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ತ್ರಿಪಕ್ಷೀಯ ಹೊಂದಾಣಿಕೆಯ (Tripartite Adjustment) ಮೂಲಕ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ: 15–03–2005.
2. ಸರ್ಕಾರದ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ: 04–09–2008.
3. ಸರ್ಕಾರದ ಆದೇಶ ಸಂಖ್ಯೆ: ಇಎನ್ 25 ಪಿಎಸ್‌ಆರ್ 2016 ದಿನಾಂಕ: 07–05–2016 ಮತ್ತು 31–05–2016.
4. ಸರ್ಕಾರದ ಆದೇಶ ಸಂಖ್ಯೆ: ಇಎನ್ 25 ಪಿಎಸ್‌ಆರ್ 2016/ಪಿ3 ದಿನಾಂಕ: 19–05–2016. (TA)
5. ಸರ್ಕಾರದ ಆದೇಶ ಸಂಖ್ಯೆ: ಇಎನ್ 37 ಪಿಎಸ್‌ಆರ್ 2016/ ದಿನಾಂಕ: 06–06–2016.

ಪ್ರಸ್ತಾವನೆ :–

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ “ಭಾಗ್ಯಜ್ಯೋತಿ/ಕುಟೀರಜ್ಯೋತಿ” ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ (ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು) ಮುಂದಿನ ಆದೇಶದವರೆಗೆ ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ರೈತರಿಗೆ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ಕರ್ನಾಟಕ ವಿದ್ಯುಚ್ಛಕ್ತಿ ವಲಯದ ಕಂಪನಿಗಳಾದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆಯನ್ನು ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನದ ಬಾಬ್ತಿಗೆ ವರ್ಷಾವಾರು ಸರಿಹೊಂದಿಸುವ ನೀತಿ ಮೊದಲಿನಿಂದಲೂ ವಾಡಿಕೆಯಲ್ಲಿದೆ.
4. ಕರ್ನಾಟಕ ವಿದ್ಯುತ್‌ಚ್ಛಕ್ತಿ ನಿಯಂತ್ರಣ ಆಯೋಗವು 2016ರ ದರ ಆದೇಶದಲ್ಲಿ 2016–17ನೇ ಸಾಲಿಗೆ ₹. 8,837.81 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನವನ್ನಾಗಿ ಬಿಡುಗಡೆ ಮಾಡಲು ನಿಗಧಿಪಡಿಸಿದೆ.
5. ಮೇಲೆ ಓದಲಾದ ಕ್ರಮಾಂಕ–(3), (4) ಮತ್ತು (5)ರಲ್ಲಿನ ಸರ್ಕಾರಿ ಆದೇಶಗಳ 2016–17ನೇ ಸಾಲಿಗೆ ಈವರೆಗೆ ಸಹಾಯಧನ ₹. 942.00 ಕೋಟಿಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಿದೆ.

**₹. ಕೋಟಿಗಳು**

| | |
|---|---|
| 2016–17ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹. 7199 ಕೋಟಿಗಳಲ್ಲಿ ನಗದು ರೂಪವಾಗಿ ನೀರಾವರಿ ಪಂಪುಸೆಟ್ಟು, ಭಾಗ್ಯಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳ ಉಚಿತ ವಿದ್ಯುತ್ ಸರಬರಾಜಿಗಾಗಿ ಸಹಾಯಧನದ ಬಾಬ್ತು | 840.00 |
| ತ್ರಿಪಕ್ಷೀಯ ಹೊಂದಾಣಿಕೆ– ಏಪ್ರಿಲ್ 2016ರ ಮಾಹೆಯವರೆಗೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು | 100.00 |
| 2016–17ನೇ ಸಾಲಿಗೆ ಶ್ರೀ ಸತ್ಯ ಸಾಯಿ ಆಸ್ಪತ್ರೆಗೆ ಸಹಾಯಧನ | 2.00 |
| **ಒಟ್ಟು** | **942.00** |

6. 2016–17ನೇ ಸಾಲಿನ ಮೇ–2016ರ ಮಾಹೆಗೆ ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸರ್ಕಾರಕ್ಕೆ ಪಾವತಿಸಬೇಕಾದ ವಿದ್ಯುತ್ ತೆರಿಗೆ ಹಾಗೂ ರಾಜಧನವನ್ನು ಈ ಕೆಳಗೆ ವಿವರಿಸಿರುವಂತೆ ತ್ರಿಪಕ್ಷೀಯ ಹೊಂದಾಣಿಕೆ (Tripartite Adjustment) ಮೂಲಕ ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನಕ್ಕೆ ಹೊಂದಾಣಿಕೆ ಮೂಲಕ ಸರಿಹೊಂದಿಸಲು ಪ್ರಸ್ತಾಪಿಸಿದೆ.

**₹. ಕೋಟಿಗಳು**

| ಕ್ರ. ಸಂ | ವಿಸಕಂ | ಮೇ–2016 |
|---|---|---|
| 1 | ಬೆವಿಕಂ | 61.35 |
| 2 | ಮವಿಕಂ | 9.52 |
| 3 | ಹುವಿಕಂ | 10.50 |
| 4 | ಗುವಿಕಂ | 9.00 |
| 5 | ಚಾವಿಸನಿನಿ | 7.50 |
| 6 | ಕವಿನಿನಿ | 0.52 |
| **ಒಟ್ಟು** | | **98.39** |
| 7 | ಕವಿನಿನಿ (ರಾಜಧನ) | 1.61 |
| **ಒಟ್ಟು** | | **100.00** |

(ಬೆವಿಕಂ ಹೊಂದಾಣಿಕೆಯ ₹. 61.35 ಕೋಟಿಗಳಲ್ಲಿ ಏಪ್ರಿಲ್–2016ನೇ ಮಾಹೆಯ ಬಾಕಿ ತೆರಿಗೆ ₹. 19.68 ಕೋಟಿಗಳು ಒಳಗೊಂಡಿದೆ.)

7. ಮೇಲೆ ವಿವರಿಸಿರುವಂತೆ, ಮೇ–2016ರ ಮಾಹೆಯಲ್ಲಿ ವಸೂಲಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ಮೊತ್ತದ ಬಾಬ್ತು ₹. 100.00 ಕೋಟಿಗಳನ್ನು ತ್ರಿಪಕ್ಷೀಯ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ. ಆದ್ದರಿಂದ, ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 25 ಪಿಎಸ್‌ಆರ್ 2016/ಪಿ3**

**ಬೆಂಗಳೂರು ದಿನಾಂಕ: 20–06–2016**

1. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ

ವಿದ್ಯುತ್ ತೆರಿಗೆ ಬಾಬ್ತು ₹. 97.87 ಕೋಟಿಗಳನ್ನು (ತೊಂಭತ್ತೇಳು ಕೋಟಿ ಎಂಭತ್ತೇಳು ಲಕ್ಷ ರೂಗಳು ಮಾತ್ರ) ವಿದ್ಯುತ್ ಸರಬರಾಜು ಕಂಪನಿಗಳು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಸರಿಹೊಂದಿಸಿ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ.

**A: ESCOM's PORTION** **(Rs. In Crs)**

| DEBIT | | CREDIT | |
|---|---|---|---|
| **Head of Account** | **Amount** | **Head of Account** | **Amount** |
| **Subsidy to ESCOMs** | | **Electricity Tax collection** | |
| 2801-80-101—1-04-106 | | 0043-00-101-0-01 | |
| BESCOM | 61.35 | BESCOM | 61.35 |
| MESCOM | 9.52 | MESCOM | 9.52 |
| HESCOM | 10.50 | HESCOM | 10.50 |
| GESCOM | 9.00 | GESCOM | 9.00 |
| CESC | 7.50 | CESC | 7.50 |
| **Total** | **97.87** | **Total** | **97.87** |

ಬೆವಿಕಂ ಹೊಂದಾಣಿಕೆಯ ₹. 61.35 ಕೋಟಿಗಳಲ್ಲಿ ಏಪ್ರಿಲ್–2016ನೇ ಮಾಹೆಯ ಬಾಕಿ ತೆರಿಗೆ ₹. 19.68 ಕೋಟಿಗಳು ಒಳಗೊಂಡಿದೆ.

2. 2016–17ನೇ ಸಾಲಿನ ಮೇ 2016ರ ಮಾಹೆಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ₹. 2.13 ಕೋಟಿಗಳನ್ನು ಸಹ ಸರ್ಕಾರವು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿರುವಂತೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ. ಕವಿನಿನಿ ಮತ್ತು ಗುವಿಕಂ ಸಂಸ್ಥೆಗಳು ವಿದ್ಯುತ್ ಖರೀದಿ ಅಸಲಿಗೆ ಲೆಕ್ಕೀಕರಿಸಲು ಆದೇಶಿಸಿದೆ.

**B: KPCL Portion** **(Rs. In Crs)**

| DEBIT | | CREDIT | |
|---|---|---|---|
| **Head of Account** | **Total Amount** | **Head of Account** | **Total Amount** |
| Subsidy to ESCOMs | | **Royalty from KPCL** | |
| 2801-80-101-1-04-106 | | 0801-01-201-0-01 | 1.61 |
| GESCOM | 2.13 | | |
| | | **Electricity Tax** | |
| (KPCL to adjust this receipt against power purchase cost of GESCOM) | | 0043-00-101-0-01 | 0.52 |
| **TOTAL – (B)** | **2.13** | **TOTAL- (B)** | **2.13** |

3. ಲೆಕ್ಕ ಮಹಾಪರಿಶೋಧಕರು ಈ ಹೊಂದಾಣಿಕೆಗಳನ್ನು ಸಂಪೂರ್ಣವಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವಂತೆ ಕೋರಿದೆ. ಈ ಆದೇಶದ ಪ್ರಕಾರ ಯಾವುದೇ ನಗದು ಬಿಡುಗಡೆ ಇರುವುದಿಲ್ಲ.

4. ಈ ಸರ್ಕಾರಿ ಆದೇಶದಲ್ಲಿ ಆದೇಶಿಸಿರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಮುಖ್ಯ ವಿದ್ಯುತ್ ಪರಿವೀಕ್ಷಕರು ಆ ಸಂಸ್ಥೆಗಳ ದಸ್ತಾವೇಜುಗಳಲ್ಲಿ ಸಮರ್ಪಕ ಹೊಂದಾಣಿಕೆ ಮಾಡಿಕೊಳ್ಳಲು ಆದೇಶಿಸಿದೆ.

5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸ ಬೇಕಾಗಿರುವ ತೆರಿಗೆ ಮತ್ತು ರಾಜಸ್ವ ₹. 2.13 ಕೋಟಿಗಳನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಸಹಯಧನವಾಗಿ ಸರಿಹೊಂದಿಸಲು ಸೂಚಿಸಿದೆ. ಈ ಮೊತ್ತವನ್ನು ವಿದ್ಯುತ್ ಖರೀದಿ ಅಸಲು ವೆಚ್ಚಕ್ಕೆ ಲೆಕ್ಕೀಕರಿಸುವುದು.

6. ಈ ಆದೇಶದಲ್ಲಿ ಹೊಂದಾಣಿಕೆ ಮೂಲಕ ಬಿಡುಗೆ ಮಾಡಿರುವ ಸಹಾಯಧನವನ್ನು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಸಹಯಧನದ ಬಾಬ್ತಿಗೆ ಬಿಡುಗಡೆ ಮಾಡಿದೆ ಎಂದು ಪರಿಗಣಿಸುವುದು.

7. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 170ವೆಚ್ಚ–1/16 ದಿನಾಂಕ 03–05–2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

**P.R. 565**

**ಇಂಧನ ಸಚಿವಾಲಯ**

**ವಿಷಯ:** ಇಂಧನ ಇಲಾಖೆಯ ಯೋಜನೇತರ ಮತ್ತು ಯೋಜನೆಗಳಿಗೆ 2016–17ನೇ ಸಾಲಿನಲ್ಲಿ ಒದಗಿಸಿರುವ ಆಯವ್ಯಯದಲ್ಲಿ ಮೊದಲ ನಾಲ್ಕು ತಿಂಗಳಿಗೆ (ಏಪ್ರಿಲ್ 2016 ರಿಂದ ಜುಲೈ 2016ರವರೆಗೆ) ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಆರ್ಥಿಕ ಇಲಾಖೆಯ ಅ ಜ್ಞಾ ಪತ್ರ ಸಂಖ್ಯೆ: ಎಫ್‌ಡಿ 4 ಬಿಪಿಇ 2016, ದಿನಾಂಕ: 31–03–2016.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 9 ಪಿಎಸ್‌ಆರ್ 2016 ದಿನಾಂಕ: 02–05–2016.

**ಪ್ರಸ್ತಾವನೆ :–**

1. ಇಂಧನ ಇಲಾಖೆಗೆ 2016–17ನೇ ಸಾಲಿನ ಆಯವ್ಯಯದಲ್ಲಿ ಯೋಜನೇತರಡಿಯಲ್ಲಿ ₹.7752.21 ಕೋಟಿಗಳನ್ನು ಹಾಗೂ ಯೋಜನೆಯಡಿಯಲ್ಲಿ ₹.957.35 ಕೋಟಿಗಳನ್ನು ಒದಗಿಸಿದೆ.
2. ಅದರನ್ವಯ ಇಂಧನ ಇಲಾಖೆಯಲ್ಲಿ 2015–16ನೇ ಸಾಲಿನಲ್ಲಿ ಪ್ರಾರಂಭವಾಗಿ ಕಾರ್ಯಪ್ರಗತಿಯಲ್ಲಿರುವ ಯೋಜನೆಗಳನ್ನು 2016–17ನೇ ಸಾಲಿನಲ್ಲಿ ಮುಂದುವರಿಸಿ ಕಾರ್ಯಾನುಷ್ಠಾನಗೊಳಿಸಲು ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ.
3. ಮೇಲೆ (1)ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಪತ್ರದಲ್ಲಿ ದಿನಾಂಕ: 01–04–2016ರಿಂದ 31–07–2016ರವರೆಗಿನ ಅವಧಿಗೆ ವಿವಿಧ ಉದ್ದೇಶಗಳಿಗೆ ಖರ್ಚು ಮಾಡಲು ಬಿಡುಗಡೆಗಾಗಿ ಇಲಾಖಾ ಮುಖ್ಯಸ್ಥರು ಮತ್ತು ಅಂದಾಜು ಅಧಿಕಾರಿಗಳಿಗೆ ಅಧಿಕಾರ ನೀಡಲಾಗಿದೆ.
4. 2016–17ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಮೊತ್ತದಲ್ಲಿ ಮೊದಲ ನಾಲ್ಕು ತಿಂಗಳಿಗೆ (ಏಪ್ರಿಲ್ 2016 ರಿಂದ ಜುಲೈ 2016ರವರೆಗೆ) ಹಣ ಬಿಡುಗಡೆ ಮಾಡುವ ಬಗ್ಗೆ ಪ್ರಸ್ತುತ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 9 ಪಿಎಸ್‌ಆರ್ 2016, ಬೆಂಗಳೂರು ದಿನಾಂಕ: 20–06–2016**

1. ಇಂಧನ ಇಲಾಖೆಗೆ 2016–17ನೇ ಸಾಲಿನ ಆಯವ್ಯಯದಲ್ಲಿ ಕೆಳಕಂಡ ಯೋಜನೇತರ ಮತ್ತು ಯೋಜನೆಗಳಿಗೆ ಮಂಜೂರಾಗಿರುವ ಮೊತ್ತವನ್ನು ಮೊದಲ ನಾಲ್ಕು ತಿಂಗಳುಗಳಿಗೆ (ಏಪ್ರಿಲ್ 2016 ರಿಂದ ಜುಲೈ 2016ರವರೆಗೆ) ಈ ಕೆಳಕಂಡಂತೆ ಹಂಚಿಕೆ ಮಾಡಿ ಆದೇಶಿಸಿದೆ.

| ಕ್ರ. ಸಂ | ಲೆಕ್ಕಶೀರ್ಷಿಕೆ ಮತ್ತು ವಿವರ | 2016–17ನೇ ಸಾಲಿನ ಆಯವ್ಯಯದಲ್ಲಿ ನಿಗಧಿಪಡಿಸಿರುವ ಮೊತ್ತ (₹. ಕೋಟಿಗಳಲ್ಲಿ) | 2016–17ನೇ ಸಾಲಿನ ಮೊದಲ ನಾಲ್ಕು ತಿಂಗಳುಗಳಿಗೆ (ಏಪ್ರಿಲ್ 2016 ರಿಂದ ಜುಲೈ 2016ರವರೆಗೆ) ಬಿಡುಗಡೆ ಮಾಡಬೇಕಾಗಿರುವ ಮೊತ್ತ (₹. ಕೋಟಿಗಳಲ್ಲಿ) | ವಿದ್ಯುತ್ ಸಂಸ್ಥೆಗಳು |
|---|---|---|---|---|
| | | **ಯೋಜನೇತರ** | | |
| 1 | 2801–80–101–1–04–106 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್, ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ. | 7,199.00 | 2399.66 | ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಹುಕ್ಕೇರಿ ಗ್ರಾಮೀಣ ಸಹಕಾರಿ ಸಂಘ |
| 2 | 2801–80–101–1–07–103 ಕ.ವಿ.ನಿ.ಆ. ಸಹಯಾನುಧಾನ– ವೇತನಗಳು | 3.12 | 1.04 | ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗ |
| 3 | 2801–80–101–1–13–106 ಪಿಂಚಣಿ ಪಾವತಿಗಾಗಿ ಅಂಶಧಾನ– ಸಹಾಯಧನ | 550.00 | 183.33 | ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್ ಪರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ |

